KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಜೂನ್ ೩, ೨೦೧೦ (ಜ್ಯೇಷ್ಠ ೧೩, ಶಕ ವರ್ಷ ೧೯೩೨) | ಸಂಚಿಕೆ ೨೨ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಎ.ಕೆ. ಪುಟ್ಟರಾಜು, ವೈದ್ಯಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವಿಶ್ವ ಆರೋಗ್ಯ ಸಂಸ್ಥೆಯಲ್ಲಿ ನಿಯೋಜನೆ ಮೇಲೆ ಇರುವವರು) ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಆಕುಕ 49 ಹೆಚ್‌ಎಸ್‌ಹೆಚ್ 2010 ದಿನಾಂಕ: 27–01–2010.
2. ಡಾ: ಎ.ಕೆ. ಪುಟ್ಟರಾಜು, ವೈದ್ಯಾಧಿಕಾರಿ, ಇವರ ಮನವಿ ಪತ್ರ ದಿನಾಂಕ: 22–03–2010.

**ಪ್ರಸ್ತಾವನೆ :**

ಡಾ: ಎ.ಕೆ. ಪುಟ್ಟರಾಜು, ವೈದ್ಯಾಧಿಕಾರಿ ಇವರು ವಿಶ್ವ ಆರೋಗ್ಯ ಸಂಸ್ಥೆಯ ಯೋಜನೆ ಅಡಿಯಲ್ಲಿನ National Polio Surveillance Project ನಲ್ಲಿ ವೈದ್ಯಾಧಿಕಾರಿ ಹುದ್ದೆಯಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿದ್ದರು. ಇವರ ನಿಯೋಜನೆಯ ಗರಿಷ್ಠ ಅವಧಿಯು ಪೂರ್ಣಗೊಂಡಿದ್ದರಿಂದ ಇವರ ಸೇವೆಯನ್ನು ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಇಲಾಖೆಗೆ ವಾಪಸ್ಸು ಪಡೆಯಲಾಗಿತ್ತು.

ಸದರಿ ವೈದ್ಯರು ವೈಯಕ್ತಿಕ ಕಾರಣಗಳ ಹಿನ್ನೆಲೆಯಲ್ಲಿ ಇಲಾಖೆಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ಅಂಗೀಕರಿಸಿ ಸೇವೆಯಿಂದ ಬಿಡುಗಡೆಗೊಳಿಸುವಂತೆ ಮೇಲೆ ಓದಲಾದ ಕ್ರಮಾಂಕ (2)ರ ಮನವಿಯಲ್ಲಿ ಕೋರಿದ್ದರು. ಸದರಿ ವೈದ್ಯರ ಕೋರಿಕೆಯನ್ನು ಪರಿಶೀಲಿಸಿ, ಇವರಿಂದ ವಿಶ್ವ ಆರೋಗ್ಯ ಸಂಸ್ಥೆಗಾಗಲೀ ಅಥವಾ ಸರ್ಕಾರಕ್ಕಾಗಲೀ ಯಾವುದಾದರೂ ಬಾಕಿ ಇದ್ದಲ್ಲಿ ಅದನ್ನು ವಸೂಲಿ ಮಾಡುವ ಷರತ್ತಿಗೊಳಪಟ್ಟು ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ ಸರ್ಕಾರವು ಪರಿಗಣಿಸಿದೆ.

ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 174 ಹೆಚ್‌ಎಸ್‌ಹೆಚ್ 2010. ಬೆಂಗಳೂರು, ದಿನಾಂಕ : 03–04–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ: ಎ.ಕೆ. ಪುಟ್ಟರಾಜು, ವೈದ್ಯಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿದ್ದ ವಿಶ್ವ ಆರೋಗ್ಯ ಸಂಸ್ಥೆಗಾಗಲೀ ಅಥವಾ ಸರ್ಕಾರಕ್ಕಾಗಲೀ ಯಾವುದಾದರೂ ಬಾಕಿ ಇದ್ದಲ್ಲಿ ಅದನ್ನು ವಸೂಲಿ ಮಾಡುವ ಷರತ್ತಿಗೊಳಪಟ್ಟು ಇವರು ಇಲಾಖೆಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 942

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀರಂಗಪಟ್ಟಣದಲ್ಲಿರುವ ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದ ಖಾಲಿ ಶೆಡ್‌ಗಳನ್ನು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ರೇಉಕೋ/ತಾಂ1/ಸಂ/ಪ್ರಸ್ತಾವ/30/ಶ್ರೀರ/2008–09, ದಿನಾಂಕ: 25–01–2010.

**ಪ್ರಸ್ತಾವನೆ :**

ಶ್ರೀರಂಗಪಟ್ಟಣದಲ್ಲಿರುವ ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದಲ್ಲಿ ರೇಷ್ಮೆ ನೂಲು ಬಿಚ್ಚಾಣಿಕೆದಾರರಿಗೆ ಉತ್ತೇಜನ ನೀಡುವ ದೃಷ್ಟಿಯಿಂದ 10 ರೀಲಿಂಗ್ ಶೆಡ್‌ಗಳನ್ನು ಸ್ಥಾಪಿಸಿ, ರೇಷ್ಮೆ ನೂಲು ಬಿಚ್ಚಾಣಿಕೆಯನ್ನು ಕೈಗೊಳ್ಳಲಾಗಿತ್ತು. ಆನಂತರ ಕಾರಾಣಾಂತರದಿಂದ ಘಟಕಗಳನ್ನು ಸ್ಥಗಿತಗೊಳಿಸಿದ್ದು, ಈ ಸಂಕೀರ್ಣದಲ್ಲಿರುವ 4 ಶೆಡ್‌ಗಳನ್ನು ಕಛೇರಿಯ ಕಾರ್ಯನಿರ್ವಾಹಣೆಗಾಗಿ ಉಪಯೋಗಿಸಲಾಗುತ್ತಿದೆ. ಸದರಿ ಕಟ್ಟಡವನ್ನು ರೇಷ್ಮೆ ಕೈಗಾರಿಕಾ ತರಬೇತಿ ಸಂಸ್ಥೆಗೆ ಹಸ್ತಾಂತರಿಸುವಂತೆ ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ ಇವರು ಕೋರಿದ್ದು, ರೇಷ್ಮೆ ಉಪನಿರ್ದೇಶಕರು ಮಂಡ್ಯ. ಇವರು ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದಲ್ಲಿ ಖಾಲಿ ಇರುವ 6 ಕೊಠಡಿಗಳನ್ನು ತಾತ್ಕಾಲಿಕವಾಗಿ ಕೈಗಾರಿಕೆ ತರಬೇತಿ ಸಂಸ್ಥೆಗೆ ಹಸ್ತಾಂತರಿಸಬಹುದೆಂದು ಅಭಿಪ್ರಾಯ ಪಟ್ಟಿರುವುದರಿಂದ ಶ್ರೀರಂಗಪಟ್ಟಣದ ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದಲ್ಲಿ ಖಾಲಿ ಇರುವ 6 ಶೆಡೆಗಳನ್ನು ತಾತ್ಕಾಲಿಕವಾಗಿ 2 ವರ್ಷಗಳ ಅವಧಿಗೆ ಇಲಾಖೆಯ ನಿಯಮಾನುಸಾರ, ಉಳಿದ 4 ಶೆಡ್‌ಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಇಲಾಖಾ ಕಛೇರಿಗಳಿಗೆ ತೊಂದರೆಯಾಗದ ರೀತಿಯಲ್ಲಿ ಸಂಸ್ಥೆಯ ಕಾರ್ಯನಿರ್ವಹಿಸುವ ಷರತ್ತಿನೊಂದಿಗೆ ಹಸ್ತಾಂತರಿಸುವುದಕ್ಕೆ ಅನುಮತಿ ನೀಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಪತ್ರದಲ್ಲಿ ರೇಷ್ಮೆ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿಲಾಗಿದ್ದು, ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದಲ್ಲಿ ರೇಷ್ಮೆ ನೂಲು ಬಿಚ್ಚಾಣಿಕೆಯು ಸ್ಥಗಿತಗೊಂಡಿರುವುದರಿಂದ ಹಾಗೂ ಸದರಿ ಸಂಕೀರ್ಣದಲ್ಲಿ 6 ಕೊಠಡಿಗಳು ಖಾಲಿ ಇರುವುದರಿಂದ, ರೇಷ್ಮೆ ಆಯುಕ್ತರು ಕೋರಿರುವಂತೆ ಸದರಿ ಕೊಠಡಿಗಳನ್ನು ತಾತ್ಕಾಲಿಕವಾಗಿ ಕೈಗಾರಿಕಾ ಮತ್ತು ತರಬೇತಿ ಸಂಸ್ಥೆಗೆ ನೀಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಾಕೈ 5 ರೇಯೋವಿ 2010, ಬೆಂಗಳೂರು, ದಿನಾಂಕ : 26–03–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಶ್ರೀರಂಗಪಟ್ಟಣದಲ್ಲಿರುವ ರೇಷ್ಮೆ ನೂಲು ಬಿಚ್ಚುವ ಸಂಕೀರ್ಣದಲ್ಲಿ ಖಾಲಿ ಇರುವ 6 ಕೊಠಡಿಗಳನ್ನು ತಾತ್ಕಾಲಿಕವಾಗಿ ಎರಡು ವರ್ಷಗಳ ಅವಧಿಗೆ ನಿಯಮಾನುಸಾರ 4 ಶೆಡ್‌ಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಇಲಾಖಾ ಕಛೇರಿಗಳಿಗೆ ತೊಂದರೆಯಾಗದ ರೀತಿಯಲ್ಲಿ ಕಾರ್ಯನಿರ್ವಹಿಸಬೇಕೆಂಬ ಷರತ್ತಿನೊಂದಿಗೆ ಹಸ್ತಾಂತರಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 943

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## HEALTH AND FAMILY WELFARE DEVELOPMENT SECRETARIAT

**Sub:** OD Consultancy service for Embedding Leadership Excellence in 400 in-service Doctors, in the Dept. of Health & Family Welfare, Govt. of Karnataka.

**Read:** Approved revised Procurement Plan for KHSDRP, November 2009.

**Preamble:**

Organization Development is a method by which reforms can be brought about in the Department of Health & Family Welfare. A result oriented approach can be adopted by doing things in better, never, acceptable and accountable ways. Organization Development also envisages attitudinal change, development of better skills and knowledge, behavioral change and communication to strengthen integrity, recognition and rewarding to promote better healthcare delivery services and refurbishing methods of accountability of healthcare services.

As discussed and consented by the World Bank Implementation Support during 20th to 26th October 2009, it was decided that a firm is to be contracted to conduct workshops on embedding leadership excellence in 400 selected in-service doctors, in the various districts of the State, in the

Department of Health and Family Welfare, through Consultant Qualification Selection basis (CQS method). This will create a "resource pool" of in-service doctors excelling in leadership qualities, also possessing leadership training capability to train the personnel of the Department of Health and Family Welfare.

An Expression of Interest (EOI) for Organization Development constultancy for Embedding Leadership Excellence in doctors under Karnataka Health System Development and Reform Project was called on 12-12-09, in the State edition newspapers. The service providers were asked to provide information indicating their experience in similar field with availability of appropriate skills. In response to the EOI. 14 firms/private organizations has submitted their EOIs. The OD Evaluation Committee of the Project has scrutinized the EOIs and shortlisted M/s. Arpita Associates Pvt. Ltd. Bangalore, for this assignment. The Request for Proposal (RFP) was issued to the firm. The technical proposal was evaluated and found that the firm qualified, technically. The Financial proposal was opened, which showed that the firm has proposed Rs. 76 lakhs for conducting the embedding Leadership Excellence workshops for the in-service doctors.

This was approved and forwarded from the Project Administrator, KHSDRP, through the Secretary H&FW Dept., Govt. of Karnataka and the Chairman of the Programme Steering Committee of KHSDRP to the Chief Secretary, Govt. of Karnataka and the Chairman of the Project Governing Board of KHSDRP, which was approved on file. This is to be placed for ratification by the Project Governing Board, through the Programme Steering Committee.

Hence the following Order.

**Govt. Order No. HFW/KHSDRP/OD/EED/43/09-10, dated: 03-04-2010.**

Under the circumstances mentioned in the preamble. Government are pleased to approve the OD consultancy services for Embedding Leadership Excellence in 400 in-service doctors by M/s. Arpita Associates Pvt. Ltd., Basavanagudi, Bangalore at a total cost of Rs. 76,00,000-00 (Rupees seventy six lakhs only) which includes remuneration to resource persons, agency service charge, administrative expenditure including workshop course materials. The food, accommodation, travel expenses of participants will be borne by KHSDRP. The TA/DA to the deputed in-service doctors shall be claimed in their respective districts.

The payment to the firm shall be in accordance with Terms of Reference (TOR) of the technical proposal which will form a part of the Contract Agreement between KHSDRP and M/s. Arpita Associates Pvt. Ltd., Basavanagudi, Bangalore-560004.

The above expenditure shall be debited under the Head of Account "2210-06-800-81-015 (Subsidiary Expense)" for the corresponding financial years.

By Order and in the name of the Governor of Karnataka

M. Shashidhar
Deputy Secretary to Government
Health and Family Welfare Development

PR No. 944

## COMMERCE & INDUSTRIES SECRETARIAT

**Sub:** Conversion of Purchase Tax on Sugarcane into Interest free Loan for the year 2008-09 – Reg.

**Read:**
1. Government Order No. CI/140/Fmi/71 DATED 06-06-1973.
2. Letter No. RFD/CR-45/07-08 dated 10-02-2009. From Commissioner of Commercial Taxes, Bangalore.
3. Letter No. RFD/CR-45/07-08 dated 27-10-2009, from Commissioner of Commercial Taxes, Bangalore.

**Preamble:**

In the Government Order read at Sl.No.1 above, sanction has been accorded for conversion of purchase tax dues from sugar factories into interest free loan and it shall be recovered over a period of

five years, after the expiry of the first ten years (concessional period) in equal annual installments to be paid before 30th September each year.

The Commissioner of Commercial Taxes in his letter read at (2) above, has sent the proposal for providing a sum of Rs. 25,91,32,002/- (Rupees Twenty Five Crores Ninety one lakhs Thirty Two thousand and two only) for conversion of purchase tax on sugarcane into interest free loan in respect of the following 7 sugar factories.

(in Rupees)

| Sl.No. | Name of the Societies | Year | Private | Co-operative |
|---|---|---|---|---|
| 1 | M/s. Raitara Sahakari<br>Sakkare Kharkhane,<br>Mudhola, Bagalkote | 2007-08 | - | 82,42,543-00 |
| 2 | M/s. Nirani Sugar Ltd.,<br>Mudhola, Bagalkote | 2007-08 | 23,94,818-00 | - |
| 3 | M/s. Jamakhandi Sugars,<br>Jamakhandi, Bagalkote | 2007-08 | 34,12,075-00 | - |
| 4 | M/s. Shamanur Sugars Ltd.,<br>Davanagere | 2007-08 | 27,96,505-00 | |
| 5 | M/s. Gem Sugars Ltd.,<br>Kundargi, Bilagi Taluk, Bagalkote | 2002-03<br>2003-04<br>2004-05<br>2005-06<br>2006-07<br>2007-08 | 16,97,545-00<br>52,02,632-00<br>75,56,050-00<br>3,53,78,533-00<br>3,49,23,973-00<br>1,27,00,445-00 | - |
| 6 | M/s. N.S.L. Sugars Ltd.,<br>Koppa, Maddur Taluk, Mandya | 2004-05<br>2005-06<br>2006-07 | 1,32,39,208-00<br>2,70,71,039-00<br>4,82,54,195-00 | - |
| 7 | M/s. Coromandal Sugars Ltd.,<br>Makavalli, K.R. Pet Taluk, Mandya | 2005-06<br>2006-07 | 2,33,82,753-00<br>3,28,79,688-00 | - |
| | | | 25,08,89,459-00 | 82,42,543-00 |
| | Total Private & Co-operative | | 25,91,32,002-00 | |

The Commissioner of Commercial Taxes in his letter read at (3) above, has stated that not to consider the proposal of purchase of tax on sugarcane into free loan of M/s. Gem Sugars Ltd. for the years 2002-03 and 2003-04 since due to some mistakes in the tax fixing orders issued by the Tax Fixing Officers.

The Proposal has been examined in detail Hence, the following Order.

**Government Order No. CI 49 SGF 2009 Bangalore, dated: 30-03-2010.**

Government are pleased to accord sanction and release a sum of Rs. 25,22,31,825/- (Rupees Twenty Five Crores Twenty Two Lakhs Thirty One Thousand Eight Hundred and Twenty Five only) towards conversion of purchase tax on sugar cane into interest free loan for the year 2008-09 to the following 7 sugar factories subject to the condition that the said release is by way of book adjustment not involving out go of cash, by debiting a sum of Rs. 82,42,543-00 (Rupees Eighty Two Lakhs Forty Two Thousand Five Hundred and Forty Three only) in respect of one Co-operative sugar factory and a sum of Rs. 24,39,89,282-00 (Rupees Twenty Four Crores Thirty Nine Lakhs Eighty Nine Thousand Two Hundred and Eighty Two only) in respect of 6 private sugar factories.

The funds released will be provided in the supplementary estimates 2009-10 (1st installment) shall be debited as loan in respect of Co-operative Sugar factories and Private sugar factories to the head of account 6840-04-190-1-16(P) 394 subsidiaries and equal amount shall be taken as receipt under head of account 0040-00-102-0-01 sales tax by contra entry as receipt from the concerned sugar factories towards purchase tax on sugar cane. This is only a book adjustment and there is no cash outgo involved.

(in Rupees)

| Sl.No. | Name of the Societies | Year | Private | Co-operative |
|---|---|---|---|---|
| 1 | M/s. Raitara Sahakari Sakkare Kharkhane, Mudhola, Bagalkote | 2007-08 | - | 82,42,543-00 |
| 2 | M/s. Nirani Sugar Ltd., Mudhola, Bagalkote | 2007-08 | 23,94,818-00 | - |
| 3 | M/s. Jamakhandi Sugars, Jamakhandi, Bagalkote | 2007-08 | 34,12,075-00 | - |
| 4 | M/s. Shamanur Sugars Ltd., Davanagere | 2007-08 | 27,96,505-00 | |
| 5 | M/s. Gem Sugars Ltd., Kundargi, Bilagi Taluk, Bagalkote | 2004-05<br>2005-06<br>2006-07<br>2007-08 | 75,56,050-00<br>3,53,78,533-00<br>3,49,23,973-00<br>1,27,00,445-00 | - |
| 6 | M/s. N.S.L. Sugars Ltd., Koppa, Maddur Taluk, Mandya | 2004-05<br>2005-06<br>2006-07 | 1,32,39,208-00<br>2,70,71,039-00<br>4,82,54,195-00 | - |
| 7 | M/s. Coromandal Sugars Ltd., Makavalli, K.R. Pet Taluk, Mandya | 2005-06<br>2006-07 | 2,33,82,753-00<br>3,28,79,688-00 | - |
| | | | 24,39,89,282-00 | 82,42,543-00 |
| | Total Private & Co-operative | | 25,22,31,825-00 | |

The Accountant General, Bangalore is requested to carry out necessary adjustments as indicated above in the books of accounts for 2009-2010.

This Order is issued with the concurrence of the Finance Department vide its U.O. Note No. FD 591 Exp-1/2009 dated 18-08-2009.

By Order and in the name of the Governor of Karnataka

P. Ananda Kumar
Desk Officer (Sugar)
Commerce & Industries Department.

PR No. 945

**ಕಂದಾಯ ಸಚಿವಾಲಯ**

**ವಿಷಯ :** ಮಾಜಿ ಅನುವಂಶಿಕ ಪಟೇಲರುಗಳಿಗೆ ರೂ. 500/– ಗಳಿಂದ ರೂ. 1000/– ಗಳಿಗೆ ಹೆಚ್ಚಿಸಿದ ಅನುದಾನವನ್ನು ಭರಿಸುವ ಬಗ್ಗೆ ಸ್ಪಷ್ಟೀಕರಣ ನೀಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 295 ಎಂವಿಎಸ್ 2006 ದಿನಾಂಕ : 18–02–2009
2. ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ : ಕಂಇ 132 ಎಂವಿಎಸ್ 2009 ದಿನಾಂಕ : 08–12–2009
3. ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ : ಕಂಇ 132 ಎಂವಿಎಸ್ 2009 ದಿನಾಂಕ : 11–01–2010

**ಪ್ರಸ್ತಾವನೆ :**

ಮಾಜಿ ಅನುವಂಶಿಕ ಪಟೇಲರುಗಳಿಗೆ ನೀಡುತ್ತಿದ್ದ ಅನುಕಂಪ ಭತ್ಯೆಯನ್ನು ನವೆಂಬರ್ 2008ರ ಮಾಹೆಯಿಂದ ಪೂರ್ವಾನ್ವಯವಾಗುವಂತೆ ಮಾಸಿಕ ರೂ. 500/– ಗಳಿಂದ 1000/– ರೂ.ಗಳಿಗೆ ಹೆಚ್ಚಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಪ್ರಸ್ತುತ ರಾಜ್ಯದಲ್ಲಿರುವ ಒಟ್ಟು 4108 ಪಟೇಲರುಗಳಿಗೆ ಅನ್ವಯವಾಗುವಂತೆ ಸರ್ಕಾರದ ಆದೇಶ

ನೀಡಲಾಗಿದೆ. ಸದರಿ ಆದೇಶದಲ್ಲಿ ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2029–00–101–1–01–015 ರಡಿಯಲ್ಲಿ ಭರಿಸುವಂತೆ ಎಲ್ಲಾ ಜಿಲ್ಲಾಧಿಕಾರಿಗಳು ಹಾಗೂ ತಹಶೀಲ್ದಾರರಿಗೆ ತಿಳಿಸಲಾಗಿತ್ತು. ಆ ನಂತರ ಮೇಲ್ಕಂಡ ಲೆಕ್ಕ ಶೀರ್ಷಿಕೆಯಲ್ಲಿ ಅನುದಾನದ ಕೊರತೆ ಕಂಡು ಬಂದ ಕಾರಣ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ತಿದ್ದುಪಡಿ ಆದೇಶದಲ್ಲಿ ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2071–01–200–01–06 ರಡಿಯಲ್ಲಿ ಭರಿಸತಕ್ಕದ್ದೆಂದು ತಿಳಿಸಲಾಗಿತ್ತು. ಆ ನಂತರ ಸದರಿ ಲೆಕ್ಕ ಶೀರ್ಷಿಕೆಯನ್ನು ಬದಲಾಯಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ : (3)ರ ಸರ್ಕಾರದ ತಿದ್ದುಪಡಿ ಆದೇಶದಲ್ಲಿ ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2071–01–200–0–06 ರಡಿಯಲ್ಲಿ ಭರಿಸುವಂತೆ ತಿಳಿಸಲಾಗಿರುತ್ತದೆ. ಈ ಸಂಬಂಧ ಮಾಜಿ ಪಟೇಲರುಗಳಿಗೆ ಮೇಲೆ ಓದಲಾದ (1)ರ ಆದೇಶದಂತೆ ಬಾಕಿ ಅನುಕಂಪ ಭತ್ಯೆ ಮತ್ತು ಪ್ರಸ್ತುತ ನೀಡಲಾಗುವ ಅನುಕಂಪ ಭತ್ಯೆಯನ್ನು ಭರಿಸುವ ಕುರಿತು ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಸ್ಪಷ್ಟೀಕರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 295 ಎಂವಿಎಸ್ 2006 ಬೆಂಗಳೂರು, ದಿನಾಂಕ : 29ನೇ ಮಾರ್ಚ್ 2010**

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಸರ್ಕಾರವು ಮಾಜಿ ಅನುವಂಶಿಕ ಪಟೇಲರುಗಳಿಗೆ ನೀಡುತ್ತಿರುವ ಅನುಕಂಪ ಭತ್ಯೆಯನ್ನು ರೂ. 500/– ರಿಂದ ರೂ. 1000/– ಗಳಿಗೆ ಹೆಚ್ಚಿಸಿರುವುದಕ್ಕೆ ಸಂಬಂಧಿಸಿದಂತೆ ಭರಿಸಬೇಕಾಗಿರುವ ಬಾಕಿ (ಅರಿಯರ್ಸ್) ಯನ್ನು ಮತ್ತು ಪ್ರಸ್ತುತ ನೀಡುತ್ತಿರುವ ಮಾಸಿಕ ಭತ್ಯೆಯನ್ನು ಲೆಕ್ಕ ಶೀರ್ಷಿಕೆ 2029–00–101–1–01–015 ರಡಿಯಲ್ಲಿ ಭರಿಸುವ ಬದಲಾಗಿ ಲೆಕ್ಕ ಶೀರ್ಷಿಕೆ 2071–01–200–0–06–251 (ಪಿಂಚಣಿ ಮತ್ತು ನಿವೃತ್ತಿ ಸೌಲಭ್ಯಗಳು) ಅಡಿಯಲ್ಲಿ ಭರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಲೀಲಾವತಿ**

ಅಧೀನ ಕಾರ್ಯದರ್ಶಿ

ಪಿ.ಆರ್. 936 ಕಂದಾಯ ಇಲಾಖೆ (ಸೇವೆಗಳು–ಎ)

**ಜಲಸಂಪನ್ಮೂಲ ಸಚಿವಾಲಯ**

**ವಿಷಯ :** ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕು, ಚಿಕ್ಕ ಅರಳಿಹಳ್ಳಿ ಅಡ್ಡಲಾಗಿ ಗ್ರಾಮದ ಹತ್ತಿರ ಅಸುಂಡಿ ನಾಲಾಕ್ಕೆ ಅಡ್ಡಲಾಗಿ ಸೈಟ್–1 (ಗುಡೂರ ಕೆರೆ ಕೆಳಭಾಗದಲ್ಲಿ) ಬಾಂದಾರ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸನೀಇ 02 ನಯೋಕಾ 2009, ದಿನಾಂಕ : 05–02–09
2. ದಿನಾಂಕ : 26–02–2010ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ವಿಜಾಪುರ/ಎಇ–3/2009–10/1229.
3. ದಿನಾಂಕ : 19–03–2010 ರಂದು ನಡೆದ ಟೆಂಡರ್ ಪರಿಶೀಲನಾ ಸಭೆಯ ನಡೆವಳಿ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 05–02–2009ರ ಅದೇಶದಲ್ಲಿ ನಬಾರ್ಡ್ ಆರ್.ಐ.ಡಿ.ಎಫ್–14ರಲ್ಲಿ ರೂ. 14477.85 ಲಕ್ಷಗಳ ಮೊತ್ತಕ್ಕೆ ಆಡಳಿತಾತಕ ಅನುಮೋದನೆ ನೀಡಲಾಗಿರುವ 260 ಕಾಮಗಾರಿಗಳ ಪೈಕಿ 50.00 ಲಕ್ಷ ರೂ.ಗಳ ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕು, ಚಿಕ್ಕ ಅರಳಿಹಳ್ಳಿ ಅಡ್ಡಲಾಗಿ ಗ್ರಾಮದ ಹತ್ತಿರ ಅಸುಂಡಿ ನಾಲಾಕ್ಕೆ ಅಡ್ಡಲಾಗಿ ಸೈಟ್–1 (ಗುಡೂರ ಕೆರೆ ಕೆಳಭಾಗದಲ್ಲಿ) ಬಾಂದಾರ ನಿರ್ಮಾಣ ಕಾಮಗಾರಿಯು ಸಹ ಸೇರಿದೆ. ಸದರಿ ಕಾಮಗಾರಿಯ ಅಂದಾಜಿಗೆ ಮುಖ್ಯ ಇಂಜಿನಿಯರ್‌ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಧಾರವಾಡ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಅಲ್ಪಾವಧಿ ಟೆಂಡರ್ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | 16–10–2009 |
| 2 | ಕನ್ನಡಪ್ರಭ ದಿನಪತ್ರಿಕೆ | 15–10–2009 |
| 3 | ಪ್ರಜಾವಾಣಿ ದಿನಪತ್ರಿಕೆ | 16–10–2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 6 ಜನ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರು ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಇವರ ತಾಂತ್ರಿಕ ಬಿಡ್‌ಗಳನ್ನು ದಿನಾಂಕ : 02–11–09 ರಂದು ತೆರೆಯಲಾಗಿದ್ದು, ಅದರಲ್ಲಿ ಒಬ್ಬರು ಗುತ್ತಿಗೆದಾರರ ಟೆಂಡರ್ ಮಾತ್ರ ಅರ್ಹವಾಗಿದ್ದು, ವಿವರ ಕೆಳಕಂಡಂತಿದೆ :

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 42,69,640/– |
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಪರಿಷ್ಕೃತ ಮೊತ್ತ | ರೂ. 42,47,161/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಆರ್.ಡಿ. ದೇಸಾಯಿ, ಗುತ್ತಿಗೆದಾರರು | 45,12,965/– | 5.70 ಹೆಚ್ಚು | 6.26 ಹೆಚ್ಚು |
| 2 | ವಿ. ರಾಮಸ್ವಾಮಿ, ಗುತ್ತಿಗೆದಾರರು | 46,82,146/– | 9.66 ಹೆಚ್ಚು | 10.24 ಹೆಚ್ಚು |

ಮೇಲೆ ಕ್ರ.ಸಂ. (1) ರಲ್ಲಿರುವ ಶ್ರೀ ಆರ್.ಡಿ. ದೇಸಾಯಿ, 1ನೇ ದರ್ಜೆ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರ್ ಮೊತ್ತವು ರೂ. 45,12,965–00ಗಳಾಗಿದ್ದು, ಇದನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 6.26 ರಷ್ಟು ಹೆಚ್ಚಾಗಿರುತ್ತದೆ. ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 19–03–2010 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕುಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 42,47,161/–ಗಳ ಮೇಲೆ ಶೇ. 6.10 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 45,06,238/– ಗಳಿಗೆ ಕಾಮಗಾರಿಯನ್ನು ಶ್ರೀ ಆರ್.ಡಿ. ದೇಸಾಯಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕೆಳಕಂಡಂತೆ ಅದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 12 ಅಪಿಬಂ 2010, ಬೆಂಗಳೂರು, ದಿನಾಂಕ : 1ನೇ ಏಪ್ರಿಲ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕು, ಚಿಕ್ಕ ಅರಳಿಹಳ್ಳಿ ಗ್ರಾಮದ ಹತ್ತಿರ ಅಸುಂಡಿ ನಾಲಾಕ್ಕೆ ಅಡ್ಡಲಾಗಿ ಸೈಟ್–1 (ಗುಡೂರ ಕೆರೆ ಕೆಳಭಾಗದಲ್ಲಿ) ಬಾಂದಾರ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 42,47,161/–ಗಳ ಮೇಲೆ ಶೇ. 6.10 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 45,06,238/– ಗಳಿಗೆ (ನಲವತ್ತೈದು ಲಕ್ಷ ಆರು ಸಾವಿರದ ಎರಡು ನೂರ ಮೂವತ್ತೆಂಟು ರೂ.ಗಳು ಮಾತ್ರ) ಶ್ರೀ ಆರ್. ಡಿ. ದೇಸಾಯಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 937 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕಿನ ಮೈಸೂರಮ್ಮನದೊಡ್ಡಿ (ಬಗ್ಗನ ದೊಡ್ಡಿ) ಅಭಿವೃದ್ಧಿ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ದಿನಾಂಕ : 26–03–2010ರ ಬೆಂಗಳೂರು, ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ : ಮುಸದ/ತಾಂಸ–1/ಸ.ಇಂ.1/ ಮೈಸೂರಮ್ಮನದೊಡ್ಡಿ/ 2009/1240.

**ಪ್ರಸ್ತಾವನೆ :**

ಮೇಲ್ಕಂಡ ಕಾಮಗಾರಿಗೆ 2009–10ನೇ ಸಾಲಿಗೆ ಮುಂದುವರೆಸಿರುವ 2007–08ನೇ ಸಾಲಿನ ಸಣ್ಣ ನೀರಾವರಿ ಬೆಂಗಳೂರು ವೃತ್ತದ ದರಪಟ್ಟಿಯಂತೆ ತಯಾರಿಸಲಾದ ರೂ. 220.00 ಲಕ್ಷದ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರುರವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಸದರಿ ಪ್ರಸ್ತಾವನೆಗೆ ದಿನಾಂಕ : 11–01–2010 ರಿಂದ 13–01–2010ರಂದು ನಡೆದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಸಭೆಯಲ್ಲಿ ಷರಾಗಳೊಂದಿಗೆ ತಿರುವಳಿ ನೀಡಲಾಗಿದೆ.

2009–10ನೇ ಸಾಲಿನ ಆಯವ್ಯಯದಲ್ಲಿ ಅಪೆಂಡಿಕ್ಸ್–ಇ (ಸಂಪುಟ–2) ಲೆಕ್ಕ ಶೀರ್ಷಿಕೆ 4702–00–101–01–07–422 ಕೆರೆಗಳ ಆಧುನೀಕರಣ ವಿಶೇಷ ಘಟಕ ಯೋಜನೆ ಶೀರ್ಷಿಕೆಯಡಿ 220.00 ಲಕ್ಷ ರೂ.ಗಳ ಅಂದಾಜು ಮೊತ್ತ ಹಾಗೂ 88.00 ಲಕ್ಷ ರೂ.ಗಳ ಅನುದಾನದೊಂದಿಗೆ ಈ ಕಾಮಗಾರಿಯನ್ನು ಕೈಗೊಳ್ಳಲು ಅವಕಾಶ ಮಾಡಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಅದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 23 ಕೆಜಿದು 2010, ಬೆಂಗಳೂರು, ದಿನಾಂಕ : 31ನೇ ಮಾರ್ಚ್ 2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕಿನ ಮೈಸೂರಮ್ಮನದೊಡ್ಡಿ (ಬಗ್ಗನ ದೊಡ್ಡಿ) ಅಭಿವೃದ್ಧಿ ಕಾಮಗಾರಿಯ, 2009–10ನೆ ಸಾಲಿಗೆ ಮುಂದುವರೆಸಿರುವ 2007–08ನೇ ಸಾಲಿನ ಸಣ್ಣ ನೀರಾವರಿ ಬೆಂಗಳೂರು ವೃತ್ತದ ದರಪಟ್ಟಿಯಂತೆ ತಯಾರಿಸಲಾದ 220.00 ಲಕ್ಷ ರೂ.ಗಳ (ಇನ್ನೂರಿಪ್ಪತ್ತು ಲಕ್ಷ ರೂ.ಗಳು ಮಾತ್ರ) ಅಂದಾಜು ಪಟ್ಟಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2. ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4. ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯು ಗಮನಿಸಿರುವ ಎಲ್ಲಾ ಅಂಶಗಳ ಪಾಲನೆಯ ನಂತರ ತಾಂತ್ರಿಕ ಮಂಜೂರಾತಿಯನ್ನು ನೀಡತಕ್ಕದ್ದು.
5. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6. ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
7. ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
8. ಇ.ಐ.ಆರ್.ಎಲ್/ವರ್ಕ್ ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.

9. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
10. ಈ ಯೋಜನೆಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಅದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 938

## HEALTH AND FAMILY WELFARE DEVELOPMENT SECRETARIAT

**Sub :** OD Consultancy service for conducting Managerial Capacity Building and Attitudinal Change Workshops for Para Medical Staff in Bellary District-reg.

**Read :** Revised Procurement Plan.

**Preamble:**

Organization Development (OD) is a method by which reforms can be brought about in the Department of Health & Family welfare. A result oriented approach can be adopted by doing things in better, newer, acceptable and accountable ways. Organization Development also envisages attitudinal change, development of better skills and knowledge, behavioural change and communication to strengthen integrity, recognition and rewarding to promote better healthcare delivery services & refurbishing methods of accountability of healthcare services.

It is felt that there is an urgent need for improvement in the quality of service, in the health care delivery system at all levels, in the Department. The main gaps identified at the personnel level are Commitment towards service, Sensitivity in dealing with patients and their relatives, Motivation, Service Orientation, Managerial Capacity, Time, People & Conflict Management and Team Spirit. Unless sincere effort is made to address these issues, Project intervention in other areas, would not yield the expected results. Though infrastructure input is essential towards building adequate health care delivery system, unless the issue of Human Resource in the process is addressed, the faith of the people in the system is not likely to improve. As approved by the Project Administrator, KHSDRP, it was decided that a firm is to be selected through Consultant Qualification Selection basis (CQS method) to conduct Managerial Capacity Building and Attitudinal Change workshops for Para Medical Staff, on pilot basis in Bellary district. This is to be conducted in twelve batches each, for Attitudinal Change Workshops and Managerial Capacity Building workshops, respectively-a total of 24 batches covering 30 para medical staff, in each batch, of the Department of Health and Family Welfare.

An advertisement for Expression of Interest (EOI) to conduct workshops on Managerial Capacity Building and Attitudinal Change was published on 19-12-09, in the State edition newspapers. The service providers were asked to provide information indicating their experience in similar field with availability of appropriate skills. In response to the advertisement, 13 firms/private organizations had submitted their EOIs. The OD Evaluation Committee has scrutinized the EOIs and shortilisted ISQT Process & Consulting Services Pvt. Ltd, Bangalore. The Request for Proposal (RFP) was issued to the firm. The technical proposal was evaluated and found that the firm qualified, technically. The financial proposal

showed that the firm has proposed Rs. 90,000-00 per batch, as workshop fee exclusive of tax-total Rs. 21,60,000-00 (Rupees twenty one lakhs and sixty thousand only) for 24 batches.

This was approved and forwarded from the Project Administrator, KHSDRP, to the Secretary, H&FW Dept., Govt. of Karnataka and the Chairman of the Programme Steering Committee of KHSDRP, which was approved on file. This is to be placed for ratification by the Programme Steering Committee.

Hence the following order.

**Govt Order No. HFW/KHSDRP/OD/P.S trg/44/09-10, Bangalore, Dated 3Rd April, 2010**

Under the Circumstances mentioned in the preamble, Government are pleased to approve the OD consultancy services for conducting Managerial Capacity Building and Attitudinal Change workshops for Para Medical Staff in Bellary District, on pilot basis, for a total cost of Rs. 90,000-00 per batch. For 24 batches the amount is Rs. 21,60,000/- (Rupees twenty one lakhs sixty thousand only) inclusive of all expenditure and exclusive of applicable taxes. The venue hiring charges and logistics will be borne by KHSDRP. The TA/DA to the deputed para medical staff shall be claimed in their respective offices.

The payment to the firm shall be in accordance with the Terms of Reference (TOR) of the technical proposal which will form a part of the Contract Agreement signed between the Project and M/s. ISQT Process & Consulting Services Pvt. Ltd., #732, 1st Floor, 12th Main, 3rd Block, Rajajinagar, Bangalore-560010.

The above expenditure shall be debited under the Head of Account "2210-06-800-81-015 (Subsidiary Expense)" for the financial year 2010-11.

By Order and in the name of the Governor of Karnataka,

**M. SHASHIDHAR**

Deputy Secretary to Government,

Health and Family welfare Development

PR. 939

**HORTICULTURE SECRETARIAT**

**Sub :** Project for " Management of Black Headed Caterpillar (BHC) menace on Coconut in Tumkur District" – Approval to draw funds on Payee's Receipt and utilize from KSHDA account.

**Read :** 1) G.O. No. AHD 153 HPP 2009 dated 02-03-2010

2) Letter of Director of Horticulture No. ತೋಇ/ತೋಬೆ/ಸತೋಅ–2/46/2007-08 dated 15-03-2010.

**Preamble:**

Approval had been accorded to the Director of Horticulture to implement the project for "Management of Black Headed Caterpillar (BHC) menace on coconut in Tumkur district" on pilot basis with the assistance from Coconut Development Board at a total project cost will be Rs. 334.00 lakhs vide Government Order read at (1) above. Further, an amount of Rs. 100.00 lakhs had been released to the Director of Horticulture towards the State share of the project.

2. The Director of Horticulture in his letter read at (2) above has informed that as the funds have been released at the end of the financial year and the programme has to be implemented on pulse polio mode. Vehicles and staff have to be pooled for which enough time will be required and hence it will be difficult to utilize the funds released with in the financial year. He has requested that Rs. 100.00 lakhs may be permitted to be drawn and deposited with KSHDA so that the funds could be utilized during the first part of 2010-11.

3. The proposal of the Director of Horticulture was examined and hence this Order.

**Government Order No. AHD 132 HGM 2010, Bangalore, Dated 30th March, 2010**

Government is pleased to permit the Director of Horticulture to utilize Rs. 100.00 lakhs released under Head of Account 2401-00-119-5-02-200 (Plan) for drawal on payee's receipt and utilize from KSHDA account within 30-06-2010.

2. The Senior Assistant Director of Horticulture (State Sector), Tumkur will draw Rs. 100.00 lakhs on payee's receipt and deposit the same to the KSHDA account of the Deputy Director of Horticulture (ZP), Tumkur district. The Deputy Director of Horticulture (ZP), Tumkur is permitted to counter sign the payee's receipt in this regard.

3. This order is issued with the concurrence of Finance Department vide its Note No. ಆಇ 417 ವೆ4/2009 dated 30-03-2010.

By Order and in the name of the Governor of Karnataka,

**S.RAJU**

Under Secretary to Government,
Horticulture Department.

PR. 941

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಅಡೆಪ್ಪ ಬನ್ನಿ, ಪಿ.ಎಸ್.ಐ. ಧನ್ನೂರ ಪೊಲೀಸ್ ಠಾಣೆ, ಬೀದರ್ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ : ಇವಿ/17/ಈವ/2007/1443 ಅಪು ಸಂ : 300/ಈವ/2008 ದಿ : 15-05-2008
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ : ಅಪೀಲು(6)23/2008-09 ಓಬಿ : 35/2008-09 ದಿನಾಂಕ : 18-12-2008
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ : 27-03-09
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)9/2009-10 ದಿನಾಂಕ : 03-07-2009
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 161 ಸಿಎನ್‌ಎಸ್ 09 ದಿನಾಂಕ : 01-02-10

**ಪ್ರಸ್ತಾವನೆ :**

ಶ್ರೀ ಅಡೆಪ್ಪ ಬನ್ನಿ, ಪಿ.ಎಸ್.ಐ. ಧನ್ನೂರ ಪೊಲೀಸ್ ಠಾಣೆ, ಬೀದರ ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಹುಲಸೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಲೋಪವೆಸಗಿದ ಆರೋಪದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ನೀವು ಈ ಮುಂಚೆ ಬೀದರ ಜಿಲ್ಲೆಯ ಹುಲಸೂರ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ. ಅಂತಾ ಜವಾಬ್ದಾರಿಯುತ ಅಧಿಕಾರಿಯನ್ನಾಗಿ ಕರ್ತವ್ಯ ನಿರ್ವಹಿಸಿದ್ದು, ಆ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಆಗುಹೋಗುಗಳ ಪ್ರತಿಯೊಂದು ಚಟುವಟಿಕೆಗಳ ಬಗ್ಗೆ ಹತ್ತಿರದ ಮೇಲಾಧಿಕಾರಿಯವರ ಗಮನಕ್ಕೆ ತರುವುದು ನಿಮ್ಮ ಆದ್ಯ ಕರ್ತವ್ಯವಾಗಿದ್ದು, ಹುಲಸೂರು ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಬರುವ ಮೆಹಕರ ಗ್ರಾಮದಲ್ಲಿ ಸಾರ್ವಜನಿಕ ರಸ್ತೆಯ ಮೇಲೆ ಅನಧಿಕೃತವಾಗಿ ಶಿವಾಜೀ ಮಹಾರಾಜರ ಫೋಟೋ ಹಚ್ಚಿದ್ದನ್ನು ಈ ಬಗ್ಗೆ ಇದರ ಗಂಭೀರತೆಯನ್ನು ಮುಂಚಿತವಾಗಿ ಸಂಗ್ರಹಣೆ ಮಾಡದೇ ಹಾಗೂ ಈ ಬಗ್ಗೆ ಮೇಲಾಧಿಕಾರಿಯವರ ಗಮನಕ್ಕೆ ತರದೇ ದಿನಾಂಕ : 21-11-2006 ರಂದು ನೀವು ತಹಸಿಲ್ದಾರ ಭಾಲ್ಕಿರವರ ಜೊತೆ ಅಳವಾಯಿ ಸ್ಮಶಾನ ಭೂಮಿಯ ವಿವಾದ ಕುರಿತು ಅಲ್ಲಿಗೆ ತೆರಳಿ ವಿವಾದದ ನಿರ್ಣಯದ ಬಳಿಕ ಮೆಹಕರ ಗ್ರಾಮದ ಸಾರ್ವಜನಿಕ ರಸ್ತೆಯ ಮೇಲೆ ನೆಟ್ಟಿಸಿರುವ

ಶಿವಾಜೀ ಮಹಾರಾಜರ ಭಾವ ಚಿತ್ರ ಕೀಳುವದಕ್ಕಿಂತ ಮುನ್ನ ಆ ಗ್ರಾಮದಲ್ಲಿ ಗ್ರಾಮದ ಮುಖ್ಯಸ್ಥರ ಸಭೆಯನ್ನು ನಡೆಸಬೇಕಾಗಿತ್ತು ನಡೆಸಲಿಲ್ಲ, ಈ ಮತೀಯ ಚಟುವಟಿಕೆಯ ಬಗ್ಗೆ ನೀವು ಗಂಭೀರತೆಯನ್ನು ಅರಿತುಕೊಳ್ಳದೇ ಮೇಲಾಧಿಕಾರಿಗಳ ಗಮನಕ್ಕೆ ತಂದು ಮೇಲಾಧಿಕಾರಿಗಳ ಸಮಕ್ಷಮ ಆ ಊರಲ್ಲಿಯ ಪ್ರಮುಖರ ಸಭೆ ನಡೆಸಬಹುದಿತ್ತು. ಅಲ್ಲದೇ ಹೆಚ್ಚಿನ ಬಲ ಕುರಿತು ಮೇಲಾಧಿಕಾರಿಯವರಲ್ಲಿ ಕೋರದೇ ಈ ರೀತಿ ನೀವು ನಿಮ್ಮ ಕರ್ತವ್ಯದಲ್ಲಿ ನಿಷ್ಕಾಳಜಿತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿ ಆ ಗ್ರಾಮದಲ್ಲಿ ನೆಟ್ಟಿಸಿದ ಶಿವಾಜಿ ಮಹಾರಾಜರ ಭಾವಚಿತ್ರ ತೆಗೆದಿದ್ದರಿಂದಲೇ ಆ ಕೋಮಿನ ಅನುಯಾಯಿಗಳು ರೊಚ್ಚಿಗೆದ್ದು ಕಲ್ಲು ತೂರಾಟ ಮಾಡಿ ಸಾರ್ವಜನಿಕ/ ಸರ್ಕಾರಿ ವಾಹನಗಳನ್ನು ಹಾನಿ/ಜಖಂ ಗೊಳಿಸಿರುತ್ತಾರೆ. ಈ ಕೃತ್ಯ ನಡೆಯುವಾಗ ನೀವು ಅದನ್ನು ಧೈರ್ಯದಿಂದ ಎದುರಿಸುವ ಸಾಮರ್ಥ್ಯ ಹೊಂದದೆ ಹೇಡಿತನ ಪ್ರದರ್ಶನ ಮಾಡಿ ನೀವು ಅ ಸ್ಥಳದಿಂದ ಓಡಿಹೋಗಿದ್ದು ಇರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪವು ಭಾಗಶಃ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿಯನ್ನು ಶಿಸ್ತು ಪ್ರಾಧಿಕಾರವು ಒಪ್ಪದೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ : 15–05–2008ರ ಅದೇಶದಲ್ಲಿ ಅರ್ಜಿದಾರರ ವೇತನವನ್ನು ಪಿ.ಎಸ್.ಐ. ಹುದ್ದೆಯ ಕನಿಷ್ಠ ಹಂತಕ್ಕೆ ಮೂರು ವರ್ಷಗಳ ಕಾಲ ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಕೆಳಗಿಳಿಸುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೆಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 18–12–2008ರ ಅದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧದ ಅರೋಪ ಭಾಗಶಃ ಸಾಬೀತಾಗಿದ್ದು ವಿಧಿಸಿರುವ ದಂಡನೆಯನ್ನು ಅರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಲು ತೀರ್ಮಾನಿಸಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮ್ಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 85 ಒಸಿಇ 2009, ಬೆಂಗಳೂರು, ದಿನಾಂಕ : 30ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಅಡೆಪ್ಪ ಬನ್ನಿ, ಪಿ.ಎಸ್.ಐ., ಧನ್ನೂರ ಪೊಲೀಸ್ ಠಾಣೆ, ಬೀದರ ಜಿಲ್ಲೆ, ಇವರ ವೇತನವನ್ನು ಪಿ.ಎಸ್.ಐ. ಹುದ್ದೆಯ ಕನಿಷ್ಠ ಹಂತಕ್ಕೆ ಮೂರು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಕೆಳಗಿಳಿಸಿ ಅದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 971

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಯು. ರಾಮಚಂದ್ರರಾವ್, ಪಿ.ಎಸ್.ಐ. ಹನುಮಂತನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ದಕ್ಷಿಣ ವಿಭಾಗ, ಬೆಂಗಳೂರು, ಇವರ ಅದೇಶ ಸಂಖ್ಯೆ : 59/ಪಿಆರ್/1/ಆರ್7 ಡಿಸಿಪಿ(ದ) 06–ದಿ : 10–01–2007
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಆಯುಕ್ತರು (ಆಡಳಿತ) ಬೆಂಗಳೂರು, ಇವರ ಆದೇಶ ಸಂಖ್ಯೆ : 9/ಅಪೀಲು/2007 ದಿನಾಂಕ : 14–06–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ : 16–07–07

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)95/2007–08 ದಿನಾಂಕ : 07–05–2008
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 226 ಸಿಎನ್‌ಎಸ್ 08 ದಿನಾಂಕ : 18–02–10

**ಪ್ರಸ್ತಾವನೆ :**

ಶ್ರೀ ಯು. ರಾಮಚಂದ್ರರಾವ್, ಪಿ.ಎಸ್.ಐ. ಹನುಮಂತನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಲೋಪ, ನಿರ್ಲಕ್ಷ್ಯತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ದಿ : 04–09–2006 ರಂದು ಸಿ.ಸಿ.ಬಿ. ಪೊಲೀಸರು ಹನುಮಂತನಗರ ಪೊಲೀಸ್ ಠಾಣೆ ಸರಹದ್ದಿನಲ್ಲಿ ಶ್ರೀ ಭೈರವೇಶ್ವರ ಎಂಟರ್ ಪ್ರೈಸಸ್, ನಂ : 44/11,13ನೇ ಮೇನ್ ಶ್ರೀನಗರ, ಬೆಂಗಳೂರು ಮಾಲೀಕರಾದ ಕೆ. ಮೋಹನ್ ಕುಮಾರ್ ಮತ್ತಿತರರು ಅನಧಿಕೃತವಾಗಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮ ಜೂಜಾಟದಲ್ಲಿ ತೊಡಗಿ ಸಾರ್ವಜನಿಕರಿಗೆ ನಂಬಿಸಿ ಮೋಸ ಮಾಡುತ್ತಿದ್ದಾರೆಂಬ ಮಾಹಿತಿ ಪಡೆದು ಆನ್‌ಲೈನ್ ಲಾಟರಿ ಏಜೆನ್ಸಿಯ ಮೇಲೆ ದಾಳಿ ನಡೆಸಿ ಆನ್‌ಲೈನ್ ಜೂಜಾಟಕ್ಕೆ ಬಳಸಿದ ಕಂಪ್ಯೂಟರ್ ಮತ್ತಿತರ ವಸ್ತುಗಳನ್ನು ವಶಪಡಿಸಿಕೊಂಡು ಸದರಿ ಆಸಾಮಿಗಳ ವಿರುದ್ಧ ಸೆಕ್ಷನ್–7(ಬಿ) ಆಫ್ ಲಾಟರಿ ರೆಗ್ಯುಲೇಷನ್ ಆಕ್ಟ್ ಮತ್ತು 420 ಐ.ಪಿ.ಸಿ ಪ್ರಕರಣ ದಾಖಲಾಗಿರುತ್ತದೆ. ಇಂತಹ ಜೂಜಾಟಗಳು ನಿಮ್ಮ ಠಾಣೆಯ ವ್ಯಾಪ್ತಿಯಲ್ಲಿ ನಡೆಯುತ್ತಿದ್ದರೂ ಸಹ ನೀವು ಅವರುಗಳ ವಿರುದ್ಧ ಯಾವುದೇ ಕ್ರಮ ಜರುಗಿಸದಿರುವುದು ಕಂಡುಬಂದಿರುತ್ತದೆ. ನೀವು ಠಾಣೆಯಲ್ಲಿ ಎಲ್ & ಓ ಕರ್ತವ್ಯ ನಿರ್ವಹಿಸುತ್ತಿದ್ದು, ಇಂತಹ ಆನ್ ಲೈನ್ ಲಾಟರಿಗಳನ್ನು ನಡೆಸುವಂತಹವರ ವಿರುದ್ಧ ಏಕೆ ಕ್ರಮ ಜರುಗಿಸುವುದಿಲ್ಲ. ನೀವು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ನಿಮ್ಮ ಕಾರ್ಯ ವೈಖರಿಯಲ್ಲಿ ತೀವ್ರತರವಾದ ವಿಫಲತೆ ಮತ್ತು ನಿರ್ಲಕ್ಷ್ಯತನವನ್ನು ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ದಕ್ಷಿಣ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ : 10–01–2007ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಆಯುಕ್ತರು (ಆಡಳಿತ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (2) ರಲ್ಲಿ ಓದಲಾದ ದಿನಾಂಕ : 14–06–2007ರ ಅದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಘಟನೆಯನ್ನು ತಡೆಗಟ್ಟುವಲ್ಲಿನ ಅರ್ಜಿದಾರರ ಪಾತ್ರವು ಠಾಣೆಯ ಪೊಲೀಸ್ ಇನ್ಸ್‌ಪೆಕ್ಟರ್‌ರವರು ಜವಾಬ್ದಾರಿಯು ಸಮಾನವಾಗಿರುವುದನ್ನು ಪರಿಗಣಿಸಿ ಶಿಸ್ತು ಪ್ರಾಧಿಕಾರದ ಅದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 135 ಒಸಿಆ 2008, ಬೆಂಗಳೂರು, ದಿನಾಂಕ : 30ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಯು. ರಾಮಚಂದ್ರರಾವ್, ಪಿ.ಎಸ್.ಐ. ಹನುಮಂತನಗರ ಪೊಲೀಸ್ ಠಾಣೆ, ಬೆಂಗಳೂರು, ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ : 10–01–2007ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ 'ವಾಗ್ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 972

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಎನ್. ಸುಭಾಷಚಂದ್ರ ಪಿ.ಎಸ್.ಐ., ಮಡಿವಾಳ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಅದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರ ಅದೇಶ ಸಂಖ್ಯೆ: ಅಪೀಲು(1)19/2007-08 ಓ.ಬಿ.ಸಂ : 15/2009-10 ದಿ: 31-07-2009
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ : 31-10-2009
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)60/2009-10 ದಿನಾಂಕ : 9-12-2009

**ಪ್ರಸ್ತಾವನೆ :**

ಶ್ರೀ ಎಸ್.ಎನ್. ಸುಭಾಷಚಂದ್ರ ಪಿ.ಎಸ್.ಐ., ಮಡಿವಾಳ ಪೊಲೀಸ್ ಠಾಣೆ, ಬೆಂಗಳೂರು ಇವರು ಕೊಪ್ಪಳ ಜಿಲ್ಲೆಯ ಯಲಬುರ್ಗಾ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯ ನಿರ್ಲಕ್ಷತೆಯ ಕಾರಣದ ಮೇಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

> "ಶ್ರೀ ಎಸ್.ಎನ್. ಸುಭಾಷಚಂದ್ರ ಪಿ.ಎಸ್.ಐ., ಮಡಿವಾಳ ಟ್ರಾಫಿಕ್ ಪೊಲೀಸ್ ಠಾಣೆ, ಬೆಂಗಳೂರು ನಗರ, ಆದ ನೀವು ಈ ಹಿಂದೆ ಕೊಪ್ಪಳ ಜಿಲ್ಲೆಯ ಯಲಬುರ್ಗಾ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಯಲಬುರ್ಗಾ ಪೊಲೀಸ್ ಠಾಣೆ ಮೊ.ನಂ. 49/05 ಕಲಂ 504, 506, 324, 307 ಐಪಿಸಿ ಪ್ರಕರಣದಲ್ಲಿ ಫಿರ್ಯಾಧಿಯು ದಿ : 29-05-2005ರಂದು ಠಾಣೆಗೆ ಬಂದು ಫಿರ್ಯಾದು ಸಲ್ಲಿಸಿದ್ದು, ಠಾಣಾ ದಿನಚರಿ ಕರ್ತವ್ಯದಲ್ಲಿದ್ದ ಮುಖ್ಯ ಪೇದೆಯವರು ನಿಮಗೆ ಸದರಿ ಮಾಹಿತಿಯನ್ನು ತಿಳಿಸಿದರೂ ಕೂಡ ನೀವು ಪ್ರಕರಣವನ್ನು ದಾಖಲು ಮಾಡಿಕೊಳ್ಳದೆ ಮುಖ್ಯ ಪೇದೆಯವರಿಗೆ ದಾಖಲಿಸಿಕೊಳ್ಳಲು ಆದೇಶಿಸಿದ ಮೇರೆಗೆ ಪ್ರಕರಣವನ್ನು ಮರುದಿನ ಅಂದರೆ ದಿ : 30-05-2005 ರಂದು ದಾಖಲಿಸಿಕೊಂಡಿರುತ್ತಾರೆ. ಪ್ರಕರಣದಲ್ಲಿ ಗಾಯಾಳು ಸರ್ಕಾರಿ ಆಸ್ಪತ್ರೆಯಲ್ಲಿ ದಾಖಲಾದ ಬಗ್ಗೆ ಹಾಗೂ ನೀವು ಗಾಯಾಳುವಿನ ಉಪಚಾರ ಕುರಿತು ಅಸ್ಪತ್ರೆಗೆ ಸಿಬ್ಬಂದಿಯನ್ನು ಕಳುಹಿಸಿ ಕೊಟ್ಟ ಬಗ್ಗೆ ಯಾವುದೇ ದಾಖಲಾತಿಗಳು ಕಂಡು ಬಂದಿರುವುದಿಲ್ಲ. ಸದರಿ ಪ್ರಕರಣದಲ್ಲಿ ನೀವು ನಿರ್ಲಕ್ಷತನದಿಂದ ತನಿಖೆಯನ್ನು ಪೂರೈಸಿ ಆರೋಪಿತರ ವಿರುದ್ಧ ನ್ಯಾಯಾಲಯಕ್ಕೆ ದೋಷಾರೋಪಣ ಪತ್ರ ಸಲ್ಲಿಸಿದ್ದು, ನ್ಯಾಯಾಂಗ ವಿಚಾರಣೆಯಲ್ಲಿ ಮೇಲ್ಕಂಡ ಲೋಪದೋಷಗಳು ಕಂಡು ಬಂದಿದ್ದರಿಂದ ಪ್ರಕರಣವು ನ್ಯಾಯಾಲಯದಲ್ಲಿ ಬಿಡುಗಡೆಯಾಗಿರುತ್ತದೆ. ಪ್ರಕರಣವು ನ್ಯಾಯಾಲಯದಲ್ಲಿ ಬಿಡುಗಡೆಯಾಗಲು, ನ್ಯಾಯಾಲಯದಿಂದ ಕಟುಟೀಕೆ ಬರಲು ನೀವು ಕಾರಣರಾಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರ ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ : 31-07-2009ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮೂರುವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಮೇಲ್ಮನವಿಯಲ್ಲಿ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇಲ್ಲದಿರುವುದರಿಂದ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 198 ಪೊಸಿಅ 2009, ಬೆಂಗಳೂರು, ದಿನಾಂಕ : 23ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎನ್. ಸುಭಾಷಚಂದ್ರ ಪಿ.ಎಸ್.ಐ., ಮಡಿವಾಳ ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 973

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎನ್. ರುದ್ರಮುನಿ, ಡಿವೈಎಸ್‌ಪಿ. ಡಿ.ಸಿ.ಆರ್.ಟಿ. ಚಿತ್ರದುರ್ಗ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಅದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರ ಅದೇಶ ಸಂಖ್ಯೆ : ಸಿಬಿ(5)60/08–09 ದಿ: 17–06–2009
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ : 10–06–2009
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಸಿಬಿ(5)60/08–09 ದಿ: 17–08–2009
4. ಕರ್ನಾಟಕ ಲೋಕ ಸೇವಾ ಅಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 157 ಸಿಎನ್‌ಎಸ್ 09 ದಿನಾಂಕ : 01–02–10

**ಪ್ರಸ್ತಾವನೆ :**

ಶ್ರೀ ಎನ್. ರುದ್ರಮುನಿ, ಡಿವೈಎಸ್‌ಪಿ. ಡಿ.ಸಿ.ಆರ್.ಟಿ. ಚಿತ್ರದುರ್ಗ, ಇವರು ಈ ಹಿಂದೆ ಭದ್ರಾವತಿ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಪಿ.ಐ., ಆಗಿ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಪಿ.ಐ., ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಲೋಪ, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

ಶ್ರೀ ಎನ್. ರುದ್ರಮುನಿ, ಡಿವೈಎಸ್‌ಪಿ. ಡಿ.ಸಿ.ಆರ್.ಟಿ. ಚಿತ್ರದುರ್ಗ ಜಿಲ್ಲೆ, ಆದ ನೀವು ಹಿಂದೆ ಪಿ.ಐ., ಆಗಿ ಭದ್ರಾವತಿ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಾಖಲಾದ ಪ್ರಕರಣ ಸಂಖ್ಯೆ : 277/04 ಕಲಂ 302, 201 ರೆ/ವಿ 34 ಐ.ಪಿ.ಸಿ. ಪ್ರಕರಣದ ತನಿಖೆಯಲ್ಲಿ ಆರೋಪಿತರನ್ನು ಕವಾಯತು ಮಾಡಿಸಿರುವುದಿಲ್ಲ. ಆರೋಪಿತನಿಂದ ವಶಪಡಿಸಿಕೊಂಡ ಚಾಕುವನ್ನು ರಾಸಾಯನಿಕ ತಜ್ಞರ ಅಭಿಪ್ರಾಯವನ್ನು ಪಡೆದಿರುವುದಿಲ್ಲ. ಇದರಿಂದ ಆರೋಪಿತರು ಖುಲಾಸೆಗೊಳ್ಳಲು ನೀವು ಕಾರಣರಾಗುವ ಮೂಲಕ ನೀವು ನಿಮ್ಮ ಕರ್ತವ್ಯದಲ್ಲಿ ಕರ್ತವ್ಯಲೋಪ, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ : 17–06–2009ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಆರೋಪದ ಪ್ರಕರಣದ ತನಿಖೆಯಲ್ಲಿ ಇವರು ಸದುದ್ದೇಶದಿಂದ ಕೈಗೊಂಡಿರುವ ಕ್ರಮಗಳನ್ನು ಪರಿಗಣಿಸಿ ಇವರ ಮೇಲ್ಮನವಿಯನ್ನು ಪರಿಗಣಿಸಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 124 ಪೊಸಿಅ 2009, ಬೆಂಗಳೂರು, ದಿನಾಂಕ : 23ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್. ರುದ್ರಮುನಿ, ಡಿವೈಎಸ್‌ಪಿ. ಡಿ.ಸಿ.ಆರ್.ಟಿ. ಚಿತ್ರದುರ್ಗ (ಅಂದಿನ ಪಿ.ಐ. ಭದ್ರಾವತಿ ಗ್ರಾಮಾಂತರ ಪೊಲೀಸ್ ಠಾಣೆ) ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ : 17–06–2009ರ ಅದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ "ವಾಗ್ದಂಡನೆ"ಯನ್ನು ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 974

## ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** 1) ಧಾರವಾಡ–ಆಳ್ನಾವರ–ರಾಮನಗರ (ರಾಜ್ಯ ಹೆದ್ದಾರಿ–34) ರಸ್ತೆಯ ಮೇಲೆ 60.40 ಕಿಮೀ ಉದ್ದವನ್ನು ಬಿ.ಓ.ಟಿ.–ವಿ.ಜಿ.ಎಫ್. (ಟೋಲ್) ಮಾದರಿಯಲ್ಲಿ ಅಭಿವೃದ್ಧಿಗೊಳಿಸುವ ಕುರಿತು.

2) ಗುಲ್ಬರ್ಗಾ ಜಿಲ್ಲೆಯಲ್ಲಿ ಮಹಾರಾಷ್ಟ್ರ ಗಡಿಯಿಂದ, ಆಳಂದ, ಗುಲ್ಬರ್ಗ, ಮಳಖೇಡ್, ಸೇಡಂ, ರಿಬ್ಬನ್‌ಪಲ್ಲಿ ಮೂಲಕ ಆಂಧ್ರಪ್ರದೇಶ ಗಡಿವರೆಗಿನ 141.20 ಕಿಮೀ. ಉದ್ದದ ರಸ್ತೆಯನ್ನು (ವಾಗಧಾರಿ–ರಿಬ್ಬನ್‌ಪಲ್ಲಿ ರಸ್ತೆ) ಬಿ.ಓ.ಟಿ.–ವಿ.ಜಿ.ಎಫ್. (ಟೋಲ್) ಮಾದರಿಯಲ್ಲಿ ಅಭಿವೃದ್ಧಿಗೊಳಿಸುವ ಕುರಿತು. (ರಾಜ್ಯ ಹೆದ್ದಾರಿ–10).

**ಉಲ್ಲೇಖ :** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರ ಸಂಖ್ಯೆ.
ಕೆಆರ್‌ಡಿಸಿಎಲ್/ಎಂ.ಡಿ./ಡಿಎಆರ್–ರಸ್ತೆ–ವಿಜಿಎಫ್/2009–10 ದಿನಾಂಕ : 02–12–2009.

**ಪ್ರಸ್ತಾವನೆ :**

1. ರಾಜ್ಯದ ಮೂಲಸೌಲಭ್ಯ ಇಲಾಖೆ ವತಿಯಿಂದ ಮೇಲಿನ ಕಾಮಗಾರಿಗಳ ಪ್ರಸ್ತಾವನೆಯನ್ನು ಭಾರತ ಸರ್ಕಾರಕ್ಕೆ ದಿನಾಂಕ : 28–07–2009ರಲ್ಲಿ ಸಲ್ಲಿಸಲಾಗಿತ್ತು.

2. ಖಾಸಗಿ ಸಹಭಾಗಿತ್ವದಲ್ಲಿ (ಪಿಪಿಪಿ) ಕೈಗೊಳ್ಳಲಾಗುವ ಮೂಲ ಸೌಕರ್ಯ ಒದಗಿಸುವ ಯೋಜನೆಗಳಿಗೆ (ವಿ.ಜಿ.ಎಫ್.) ಆರ್ಥಿಕ ಸಹಾಯ ನೀಡುವ ಬಗ್ಗೆ ಪರಿಶೀಲಿಸಲು ಅಸ್ಥಿತ್ವದಲ್ಲಿರುವ ಎಂಪವರ್ಡ್ ಇನ್ಸಿಟಿಟೂಷನ್ ಸಮಿತಿಯ 18ನೇ ಸಭೆಯು ದಿನಾಂಕ : 02–07–2009 ರಂದು ಅಪರ ಕಾರ್ಯದರ್ಶಿಗಳು, ಆರ್ಥಿಕ ವ್ಯವಹಾರಗಳ ಇಲಾಖೆ (ಭಾರತ ಸರ್ಕಾರ) ಇವರ ಅಧ್ಯಕ್ಷತೆಯಲ್ಲಿ ಜರುಗಿದ್ದು, ಈ ಸಭೆಯಲ್ಲಿ ರಾಜ್ಯದ ಮೇಲಿನ ಎರಡು ಕಾಮಗಾರಿಗಳ ಪ್ರಸ್ತಾವನೆಯಂತೆ ಯೋಜನೆಯ ವೆಚ್ಚವನ್ನು ಅನುಕ್ರಮವಾಗಿ 237.60 ಕೋಟಿ ರೂ.ಗಳ ಹಾಗೂ 242.35 ಕೋಟಿ ರೂ.ಗಳಿಗೆ ಹೆಚ್ಚಿಸಿರುವುದನ್ನು ಒಪ್ಪಿದ್ದು, ಕಾಮಗಾರಿಗಳಿಗೆ ಟೆಂಡರ್ ಕರೆಯುವಂತೆ ಸೂಚಿಸಲಾಗಿತ್ತು.

3. ಭಾರತ ಸರ್ಕಾರದ ಮೇಲಿನ ಸೂಚನೆಯಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಬೆಂಗಳೂರು, ಇವರು ಪರಿಷ್ಕೃತ ಯೋಜನಾ ಮೊತ್ತಕ್ಕೆ ಟೆಂಡರ್ ಆಹ್ವಾನಿಸಿ, ಭರ್ತಿಗೊಳಿಸಿದ ಟೆಂಡರ್ ಸಲ್ಲಿಸಲು ಕಡೆಯ ದಿನಾಂಕವನ್ನು 05–10–2009 ರಂದು ನಿಗದಿಪಡಿಸಲಾಗಿತ್ತು. ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ಟೆಂಡರ್‌ಗಳನ್ನು ಆಹ್ವಾನಿಸಲಾಗಿತ್ತು.

4. ಸದರಿ ಟೆಂಡರ್‌ನ ತಾಂತ್ರಿಕ ಬಿಡ್‌ಗಳನ್ನು ದಿನಾಂಕ : 08–10–2009 ರಂದು ಹಾಗೂ ಆರ್ಥಿಕ ಬಿಡ್‌ಗಳನ್ನು ದಿನಾಂಕ : 30–10–2009 ರಂದು ತೆರೆಯಲಾಯಿತು, ಟೆಂಡರ್‌ಗಳನ್ನು ತೆರೆದಾಗ, ಮೆ: ಜಿವಿಆರ್ ಇನ್‌ಫ್ರಾ ಪ್ರಾಜೆಕ್ಟ್ಸ್ ಲಿ – ಮೆ:ಆರ್.ಎಮ್.ಎನ್. ಇನ್‌ಫ್ರಾಸ್ಟ್ರಕ್ಚರ್ ಲಿ, ಮತ್ತು ಮೆ: ಪ್ರತ್ಯೂಷಾ ಅಸೋಸಿಯೇಟ್ಸ್ ಶಿಪ್ಪಿಂಗ್ ಪ್ರೈ.ಲಿ. ಕಂಪನಿಗಳ ಕೂಟ ಟೆಂಡರ್ ಸಲ್ಲಿಸಿರುವುದು ತಿಳಿದುಬಂದಿರುತ್ತದೆ.

5. ದಿನಾಂಕ : 13–11–2009 ರಂದು ನಡೆದ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ತಾಂತ್ರಿಕ ಉಪ ಸಮಿತಿಯ 83ನೇ ಸಭೆಯಲ್ಲಿ ಸದರಿ ಯೋಜನೆಗಳ ಟೆಂಡರ್‌ನ ಆರ್ಥಿಕ ಬಿಡ್‌ಗಳ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸದರಿ ಟೆಂಡರ್‌ನಲ್ಲಿ ಭಾಗವಹಿಸಿರುವ ಕಂಪನಿಗಳ ಕೂಟದೊಂದಿಗೆ ಸಂಧಾನ ನಡೆಸಿ,

ಅಂತಿಮವಾಗಿ ಒಪ್ಪಿಗೆಯಾದ ಟೆಂಡರ್‌ನ ಮೊತ್ತದ ಪ್ರಸ್ತಾವನೆಯನ್ನು ಮುಂದಿನ ನಿಗಮದ ಮಂಡಳಿಯ ಅನುಮೋದನೆಗೆ ಮಂಡಿಸಬೇಕೆಂಬ ಷರತ್ತಿನೊಂದಿಗೆ ನಿಗಮದ ತಾಂತ್ರಿಕ ಸಮಿತಿಯು ಪ್ರಸ್ತಾವನೆಯನ್ನು ಅನುಮೋದಿಸಿರುತ್ತದೆ.

6. ತಾಂತ್ರಿಕ ಸಮಿತಿಯ ನಿರ್ದೇಶನದಂತೆ ದಿನಾಂಕ : 17–11–2009 ರಂದು ಏಜೆನ್ಸಿಯೊಂದಿಗೆ ಸಂಧಾನ ನಡೆಸಿ, ಯುಟಿಲಿಟಿ ಸ್ಥಳಾಂತರ, ಕಂಟಿನ್‌ಜೆನ್ಸಿ ಹಾಗೂ ಇತರೆ ವೆಚ್ಚಗಳನ್ನು ಹೊರತುಪಡಿಸಿದಂತೆ ಯೋಜನೆಯ ಒಟ್ಟಾರೆ ಮೊತ್ತದಲ್ಲಿ ವಿ.ಜಿ.ಎಫ್. ಮೊತ್ತಕ್ಕೆ/ಶೇಕಡಾದಲ್ಲಿ ರಿಯಾಯಿತಿ ನೀಡುವಂತೆ ತಿಳಿಸಲಾಗಿದ್ದು, ಅದರಂತೆ ಈ ಏಜೆನ್ಸಿಯು ಕೆಳಗಿನಂತೆ ಪರಿಷ್ಕೃತ ದರಗಳನ್ನು ಸಂಧಾನದ ನಂತರ ನೀಡಿರುತ್ತದೆ.

ಕೋಟಿ ರೂ. ಗಳಲ್ಲಿ

| ಕ್ರ. ಸಂ. | ಯೋಜನೆ ಹೆಸರು | ಒಟ್ಟಾರೆ ಯೋಜನಾ ವೆಚ್ಚ | ಯುಟಿಲಿಟಿ ಸ್ಥಳಾಂತರ, ಕಂಟಿಜೆನ್ಸಿ ಹೊರತುಪಡಿಸಿ ಯೋಜನಾ ವೆಚ್ಚ | ವಿ.ಜಿ.ಎಫ್.ಹೊರತುಪಡಿಸಿದ ಯುಟಿಲಿಟಿ, ಕಂಟಿಜೆನ್ಸಿ ಮತ್ತು ಯೋಜನಾ ವೆಚ್ಚ (40%) | ಏಜಿನ್ಸಿ ಒಪ್ಪಿರುವ ವಿ.ಜಿ.ಎಫ್. ಮೊತ್ತ ಹಾಗೂ ಎನ್.ಪಿ.ವಿ.10% ಪ್ರತಿ ವರ್ಷಕ್ಕೆ | |
|---|---|---|---|---|---|---|
| 1. | ಧಾರವಾಡ–ರಾಮನಗರ ರಸ್ತೆ | 237.60 | 230.29 | 92.11 | 82.90 | 36.00% |
| 2. | ವಾಗಧರಿ–ರಿಬ್ಬನಪಲ್ಲಿ ರಸ್ತೆ | 242.75 | 238.58 | 95.43 | 90.66 | 38.00% |

7. ಬಿ.ಓ.ಟಿ.–ವಿ.ಜಿ.ಎಫ್. (ಟೋಲ್) ಆಧಾರದಲ್ಲಿ ಕೈಗೊಳ್ಳಲು ಮೇಲಿನ ಪ್ರಸ್ತಾವನೆಗಳು 2006–07ನೇ ಸಾಲಿನ ಆರ್ಥಿಕ ವರ್ಷದಲ್ಲಿ ಪ್ರಾರಂಭವಾಗಿದ್ದು, ಇದುವರೆಗೂ ವಾಸ್ತವ ರೂಪಕ್ಕೆ ಬಂದಿರುವುದಿಲ್ಲ. ಸದರಿ ಯೋಜನೆಗಳು ಶೀಘ್ರವಾಗಿ ಅನುಷ್ಠಾನವಾಗುವುದು ಎಂದು ಭಾವಿಸಿ, ಸದರಿ ರಸ್ತೆಗಳಲ್ಲಿ ನಿರ್ವಹಣೆ/ಮರುಡಾಂಬರೀಕರಣ ಕಾಮಗಾರಿಗಳನ್ನು ಸಹ ಕೈಗೊಂಡಿರುವುದಿಲ್ಲ. ಪ್ರಸ್ತುತ ಸದರಿ ರಸ್ತೆಗಳ ಸ್ಥಿತಿ ತುಂಬ ಹದಗೆಟ್ಟಿದ್ದು ಸುಗಮವಾಹನ ಸಂಚಾರಕ್ಕೆ ತೊಂದರೆಯಾಗಿದೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 64 ಇಎಪಿ 2009, ಬೆಂಗಳೂರು, ದಿನಾಂಕ : 3ನೇ ಏಪ್ರಿಲ್ 2010**

ಮೆ: ಜಿವಿಆರ್ ಇನ್‌ಫ್ರಾ ಪ್ರಾಜೆಕ್ಟ್ಸ್ ಲಿ – ಮೆ:ಆರ್.ಎಮ್.ಎನ್. ಇನ್‌ಫ್ರಾಸ್ಟ್ರಕ್ಚರ್ಸ್ ಲಿ. ಮತ್ತು ಮೆ: ಪ್ರತ್ಯೂಷಾ ಅಸೋಸಿಯೇಟ್ಸ್ ಶಿಪ್ಪಿಂಗ್ ಪ್ರೈ.ಲಿ. ಕಂಪನಿಗಳ ಕೂಟದ ಕೆಳಕಂಡ ವಿ.ಜಿ.ಎಫ್. ಕಾಮಗಾರಿಗಳ ಸಂಧಾನದ ಟೆಂಡರ್‌ಗೆ ಸರ್ಕಾರದ ಅನುಮೋದನೆಯನ್ನು ಈ ಕೆಳಕಂಡಂತೆ ನೀಡಲಾಗಿದೆ.

i) ಧಾರವಾಡ–ಅಳ್ನಾವರ–ರಾಮನಗರ (ರಾಜ್ಯ ಹೆದ್ದಾರಿ–34) ರಸ್ತೆಯ 60.40 ಕಿಮೀ ಉದ್ದವನ್ನು ಬಿ.ಓ.ಟಿ.–ವಿ.ಜಿ.ಎಫ್. (ಟೋಲ್) ಮಾದರಿಯಲ್ಲಿ ಅಭಿವೃದ್ಧಿಗೊಳಿಸುವ ಕಾಮಗಾರಿ ಟೆಂಡರ್‌ನ ವಿ.ಜಿ.ಎಫ್. ಪ್ರೈಸ್ ಬಿಡ್ ಮೊತ್ತ 82.90 ಕೋಟಿ ರೂ.ಗಳು (ಎಂಬತ್ತೆರಡು ಕೋಟಿ ತೊಂಬತ್ತು ಲಕ್ಷ ರೂಪಾಯಿಗಳು ಮಾತ್ರ) – (36%) ಹಾಗೂ ಎನ್.ಪಿ.ವಿ. 10%. (ಶೇಕಡ 36 ವಿ.ಜಿ.ಎಫ್ ನಲ್ಲಿ ಭಾರತ ಸರ್ಕಾರವು ಶೇಕಡ 20 ರಷ್ಟನ್ನು ಭರಿಸುತ್ತದೆ ಹಾಗೂ ಉಳಿದ ಶೇಕಡ 16 ರಷ್ಟನ್ನು ರಾಜ್ಯ ಸರ್ಕಾರದಿಂದ ಭರಿಸುವುದು).

ii) ಗುಲ್ಬರ್ಗಾ ಜಿಲ್ಲೆಯಲ್ಲಿ ಮಹಾರಾಷ್ಟ್ರ ಗಡಿಯಿಂದ, ಆಳಂದ, ಗುಲ್ಬರ್ಗ ಮಳಖೇಡ್, ಸೇಡಂ, ರಿಬ್ಬನ್‌ಪಲ್ಲಿ ಮೂಲಕ ಆಂಧ್ರಪ್ರದೇಶ ಗಡಿವರೆಗಿನ 141.20 ಕಿಮೀ. ಉದ್ದದ ರಸ್ತೆಯನ್ನು (ವಾಗಧಾರಿ–ರಿಬ್ಬನ್‌ಪಲ್ಲಿ ರಸ್ತೆ) ಬಿ.ಓ.ಟಿ.– ವಿ.ಜಿ.ಎಫ್ (ಟೋಲ್) ಮಾದರಿಯಲ್ಲಿ ಅಭಿವೃದ್ಧಿಗೊಳಿಸುವ ಕಾಮಗಾರಿ ಟೆಂಡರ್‌ನ ವಿ.ಜಿ.ಎಫ್. ಪ್ರೈಸ್ ಬಿಡ್ ಮೊತ್ತ 90.66 ಕೋಟಿ ರೂ.ಗಳು (ತೊಂಬತ್ತು ಕೋಟಿ ಅರವತ್ತಾರು ಲಕ್ಷ ರೂಪಾಯಿಗಳು ಮಾತ್ರ) (38%) ಹಾಗೂ ಎನ್.ಪಿ.ವಿ. 10%. (ಶೇಕಡ 38 ವಿ.ಜಿ.ಎಫ್ ನಲ್ಲಿ ಭಾರತ ಸರ್ಕಾರವು ಶೇಕಡ 20 ರಷ್ಟನ್ನು ಭರಿಸುತ್ತದೆ ಹಾಗೂ ಉಳಿದ ಶೇಕಡ 18 ರಷ್ಟನ್ನು ರಾಜ್ಯ ಸರ್ಕಾರದಿಂದ ಭರಿಸುವುದು).

ಮೇಲಿನ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಲೋಇ 23 ಎಫ್‌ಸಿ–1/2010 ದಿನಾಂಕ : 16–02–2010 ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ದೇವಿ ಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

ಪಿ.ಆರ್. 975

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ :** 2009–10ನೇ ಸಾಲಿನಲ್ಲಿ ಪ್ರಧಾನ ಲೆಕ್ಕಶೀರ್ಷಿಕೆ 5054ರ ಅಡಿಯಲ್ಲಿ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ :** 1. ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರ ಸಂಖ್ಯೆ . ಕರ ಆನಿನಿ/ ವ್ಯ.ನಿ/ 2009–10/3159 ದಿ : 20–03–2010.

**ಪ್ರಸ್ತಾವನೆ :**

2009–10ನೇ ಸಾಲಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಲೆಕ್ಕಶೀರ್ಷಿಕೆ 5054–80–190–0–01–132 (ಯೋಜನೆ) ಅಡಿಯಲ್ಲಿ ಬಂಡವಾಳ ಕಾಮಗಾರಿಗಳಿಗಾಗಿ ರೂ. 225.00 ಕೋಟಿಗಳನ್ನು ಮತ್ತು ಲೆಕ್ಕಶೀರ್ಷಿಕೆ 5054–80–190–0–01–133 (ಯೋಜನೆ) ಅಡಿಯಲ್ಲಿ ವಿಶೇಷ ಅಭಿವೃದ್ಧಿ ಯೋಜನೆಗಾಗಿ ರೂ. 100.00 ಕೋಟಿಗಳನ್ನು ಒದಗಿಸಲಾಗಿದ್ದು, ಒಟ್ಟು ರೂ. 325.00 ಕೋಟಿಗಳ ಅನುದಾನ ಒದಗಿಸಲಾಗಿತ್ತು. ಸದರಿ ಸಾಲಿನಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಲ್ಲಿನ ಕಾಮಗಾರಿಗಳ ಬಾಕಿ ಬಿಲ್ಲುಗಳನ್ನು ಹಾಗೂ ಕೈಗೊಂಡಿರುವ ಹೊಸ ಯೋಜನೆಗಳನ್ನು ಪರಿಗಣಿಸಿ ಒದಗಿಸಲಾಗಿರುವ 200.00 ಕೋಟಿ ರೂ.ಗಳ ಹೆಚ್ಚುವರಿ ಅನುದಾನವನ್ನು ಸೇರಿಸಿ ಒಟ್ಟಾರೆ 525.00 ಕೋಟಿ ರೂ.ಗಳ ಅನುದಾನವನ್ನು ಒದಗಿಸಲಾಗಿದೆ.

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಒದಗಿಸಿರುವ 525.00 ಕೋಟಿ ರೂ.ಗಳಲ್ಲಿ ಇದುವರೆಗೂ 408.70 ಕೋಟಿ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ. ಮುಂದುವರೆದು, ಸರ್ಕಾರಕ್ಕೆ ಬರಬೇಕಾಗಿರುವ 32.00 ಕೋಟಿ ರೂಗಳ ಗ್ಯಾರಂಟಿ ಕಮೀಷನ್ ಕಡಿತಗೊಳಿಸಿ ಬಾಕಿ ಉಳಿದ 84.00 ಕೋಟಿ ರೂಗಳನ್ನು ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರದಲ್ಲಿ ಕೋರಲಾಗಿದೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಗಿನಂತೆ ಅದೇಶ ಹೊರಡಿಸಲಾಗಿದೆ.

**ಸರ್ಕಾರಿ ಅದೇಶ ಸಂಖ್ಯೆ : ಲೋಇ 59 ಇಎಪಿ 2008, ಬೆಂಗಳೂರು, ದಿನಾಂಕ : 30ನೇ ಮಾರ್ಚ 2010**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಿಂದ ಕೈಗೊಂಡು ಪ್ರಗತಿಯಲ್ಲಿರುವ ಕಾಮಗಾರಿಗಳ ಬಾಕಿ ಬಿಲ್ಲುಗಳ ಪಾವತಿಗಾಗಿ 2009–10ನೇ ಸಾಲಿನಲ್ಲಿ ಈ ಕೆಳಕಂಡ ಲೆಕ್ಕಶೀರ್ಷಿಕೆಗಳ ಅಡಿಯಲ್ಲಿ ಒಟ್ಟು 84.00 ಕೋಟಿ ರೂಗಳನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲಾಗಿದೆ.

1. ಲೆಕ್ಕಶೀರ್ಷಿಕೆ "5054–80–190–0–01–132 ಬಂಡವಾಳ ವೆಚ್ಚದಡಿ" ಹುಬ್ಬಳ್ಳಿ – ಧಾರವಾಡ ಚತುಷ್ಪಥ ರಸ್ತೆ ಯೋಜನೆಗಾಗಿ ಮೀಸಲಿಡಲು 50.00 ಕೋಟಿ ರೂಗಳು (ಐವತ್ತು ಕೋಟಿ ರೂಗಳು ಮಾತ್ರ)
2. ಲೆಕ್ಕಶೀರ್ಷಿಕೆ "5054–80–190–0–01–132 ಬಂಡವಾಳ ವೆಚ್ಚದಡಿ" ಇತರೆ ಯೋಜನೆಗಳಿಗಾಗಿ 34.00 ಕೋಟಿ ರೂಗಳು (ಮೂವತ್ತಾನಾಲ್ಕು ಕೋಟಿ ರೂಗಳು ಮಾತ್ರ).

ಮುಂದುವರೆದು, ನಿಗಮವು ಒಟ್ಟು 84.00 ಕೋಟಿ ರೂ.ಗಳನ್ನು (ಎಂಬತ್ತಾನಾಲ್ಕು ಕೋಟಿ ರೂಪಾಯಿಗಳು ಮಾತ್ರ) ಬಿಲ್ಲನ್ನು ಕೆ.ಎಫ್.ಸಿ.17(ಸಿ)4 ರಲ್ಲಿನಂತೆ ಮಹಾಲೇಖಪಾಲರಿಂದ (ಎ ಅಂಡ್ ಇ) ಆಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು; ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ನಿರ್ದೇಶಕರು (ಆರ್ಥಿಕ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಇವರ ಮೇಲುರುಜು ಮಾಡಿಸಿ, ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಲೋಇ 281 ಅಕೋ–1/10 ದಿನಾಂಕ : 30–03–2010 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ದೇವಿಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

ಪಿ.ಆರ್. 976

## ENERGY SECRETARIAT

**Sub :** Transfer of 0.6 MW wind power capacity in favour of M/s Vishwa Vinayaka Minerals-reg.

**Read :**
1. Government Order No: EN 47 NCE 2006 dated: 20-04-2006.
2. Government Order No: EN 245 NCE 2006 (1) dated: 22-06-2006.
3. Government Order No: EN 245 NCE 2006 (2) dated: 22-06-2006.
4. Government Order No: EN 245 NCE 2006 (3) dated: 22-06-2006.
5. Government Order No: EN 5 NCE 2007 dated: 09-01-2007.
6. Government Order No: EN 531 NCE 2009 dated: 29-10-2009.
7. Letter No: KRED/08/VVM-SA/2010/539 dated: 24/26-02-2010 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded for implementation of 5.00 MW capacity Wind Power Project in favour of M/s Shah Agency at Gajendragad, Koppal District.

In the Government Order read at (2) above, the capacity has been enhanced from 5 MW to 17.4 MW in favour of M/s Shah Agency at Gajendragad, Gadag District.

In the Government Order read at (3) above, the capacity has been enhanced from 17.4 MW to 22.2 MW in favour of M/s Shah Agency at Gajendragad, Gadag District.

In the Government Order read at (4) above, the capacity has been enhanced from 22.2 MW to 27.00 MW in favour of M/s Shah Agency at Gajendragad, Gadag District.

In the Government Order read at (5) above, the capacity has been enhanced from 27.00 MW to 34.8 MW in favour of M/s Shah Agency at Gajendragad, Gadag District.

In the Government Order read at (6) above, the capacity has been further enhanced from 34.8 MW to 36.4 MW in favour of M/s Shah Agency at Gajendragad, Gadag District.

The Managing Director, Karnataka Renewable Energy Development Limited, Bangalore in his letter read at (7) above has recommended for transfer of 0.6 MW wind power capacity from out of 36.4 MW wind power capacity in favour of M/s Vishwa Vinayaka Minerals from M/s Shah Agency at Vadegola and Rajur villages, Ron Taluk, Gadag District.

The proposal has been examined in detail and the following Orders are issued:

**Government Order No. EN 81 NCE 2010, Bangalore, Dated 6th March 2010.**

Government accords approval for transrfer of 0.6 MW wind power capacity from out of sanctioned 36.4 MW wind power capacity in favour of M/s Vishwa Vinayaka Minerals from M/s Shah Agency at Vadegola and Rajur villages, Ron Taluk, Gadag District as detailed below and subject to the following conditions:

| Village name | Taluk and District | Land Surgvey Number | Extend in land | Wind Turbine Generator Location No. |
|---|---|---|---|---|
| Vadegola | Ron Taluk Gadag District | 43 | 1.1 Acres per WTG x 1 No's | 56 |
| Rajur | Ron Taluk Gadag District | 57 | | |

1. M/s Vishwa Vinayaka Minerals shall execute an agreement with Government within 45 (forty five) days from the date of issue of this Order

2. PPA is assigned to HESCOM. HESCOM shall execute the PPA/Wheeling and Banking with M/s Vishwa Vinayaka Minerals within a period of one month.
3. The Government has reserved the power to Cancel/modify this Order.
4. The company shall commission the project by April 2010.

The other terms and conditions of the Government Order No: EN 47 NCE 2006 dated: 20-04-2006 shall IPSO FACTO applicable.

By order and in the name of the Governor of Karnataka,

**S.J. SAMPATHKUMAR**

Under Secretary to Government,

Energy Department.

PR. 797

**ಒಳಾಡಳಿತ ಸಚಿವಾಲಯ**

**ವಿಷಯ :** ಪೊಲೀಸ್ ಸಿಬ್ಬಂದಿಗಳಿಗೆ ಕಾಲಾನುಕಾಲಕ್ಕೆ ಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ :** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ : ಆರ್.ಎಲ್.ಎನ್.(1)17/2002–03, ದಿನಾಂಕ : 28–03–09 ಮತ್ತು ದಿನಾಂಕ : 03–11–2009.

**ಪ್ರಸ್ತಾವನೆ :**

ಪೊಲೀಸ್ ಸಿಬ್ಬಂದಿಯು ನಿರ್ವಹಿಸುತ್ತಿರುವ ವಿಶಿಷ್ಠ ಸೇವೆಯನ್ನು ಗಮನಿಸಿ ಅವರ ಮನೋಸ್ಥೈರ್ಯ ಹೆಚ್ಚಿಸುವ ದೃಷ್ಟಿಯಿಂದ ಕಾಲಬದ್ಧ ಮುಂಬಡ್ತಿಯ ಅಗತ್ಯತೆ ಇರುತ್ತದೆ. ನಾಗರೀಕ ಪೊಲೀಸ್ ಮತ್ತು ಸಶಸ್ತ್ರ ಮೀಸಲು ಪಡೆಯ ಪೈಕಿ ನಾಗರೀಕ ಪೊಲೀಸ್‌ನ 969 ಮತ್ತು ಸಶಸ್ತ್ರ ಮೀಸಲು ಪಡೆಯ 2396 ಪೊಲೀಸ್ ಕಾನ್ಸ್‌ಟೇಬಲ್‌ಗಳು 18 ವರ್ಷಗಳಾದರು ಯಾವುದೇ ಮುಂಬಡ್ತಿ ಹೊಂದದಿರುವ ಅಂಶವನ್ನು ಮತ್ತು ಅಂತಹ ಸಿಬ್ಬಂದಿಯ ಮನೋಸ್ಥೈರ್ಯ ಹೆಚ್ಚಿಸಿ ಉತ್ತಮ ಸೇವೆ ಸಲ್ಲಿಸಲು ಅವಕಾಶ ನೀಡುವುದರ ದೃಷ್ಟಿಯಿಂದ ಇಲಾಖೆಯಲ್ಲಿ 18 ವರ್ಷಗಳ ಕಾಲ ಪೊಲೀಸ್ ಕಾನ್ಸ್‌ಟೇಬಲ್‌ಗಳಾಗಿ ಕೆಲಸ ಮಾಡಿರುವವರನ್ನು ಹೆಡ್ ಕಾನ್ಸ್‌ಟೇಬಲ್‌ಗಳಾಗಿಯೂ ಒಟ್ಟು 25 ವರ್ಷಗಳ ಸೇವೆಯ ನಂತರ ಸಹಾಯಕ ಸಬ್‌ಇನ್ಸ್‌ಪೆಕ್ಟರ್‌ಗಳಾಗಿಯೂ ಮತ್ತು ಒಟ್ಟು 28 ವರ್ಷ ಸೇವೆ ಸಲ್ಲಿಸಿರುವವರನ್ನು ಸಬ್‌ಇನ್ಸ್‌ಪೆಕ್ಟರ್‌ಗಳಾಗಿಯೂ ಮುಂಬಡ್ತಿ ನೀಡಲು ಮತ್ತು ಇದಕ್ಕಾಗಿ 15029 ಹುದ್ದೆಗಳನ್ನು ಮೇಲ್ದರ್ಜೆಗೇರಿಸಲು ಮೇಲೆ ಓದಲಾದ ಪತ್ರದಲ್ಲಿ ಡಿ.ಜಿ. ಮತ್ತು ಐ.ಜಿ.ಪಿ. ರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 297 ಪೊಸಿಇ 2009 ಬೆಂಗಳೂರು ದಿನಾಂಕ : 05–04–2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ನಾಗರಿಕ ಪೊಲೀಸ್‌ನ 969 ಮತ್ತು ಸಶಸ್ತ್ರ ಮೀಸಲು ಪಡೆಯ 2396 ಪೊಲೀಸ್ ಕಾನ್ಸ್‌ಟೇಬಲ್‌ಗಳಿಗೆ ಮುಂಬಡ್ತಿ ನೀಡಲು ಅವಕಾಶವಾಗುವಂತೆ ಈ ಹುದ್ದೆಗಳನ್ನು ಪೊಲೀಸ್ ಹೆಡ್ ಕಾನ್ಸ್‌ಟೇಬಲ್ ವೃಂದಕ್ಕೆ ಉನ್ನತೀಕರಿಸಲು ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಮಂಜೂರಾತಿ ನೀಡಿದೆ.

1. ಯಾವುದೇ ಕಾರಣಕ್ಕೂ ಉನ್ನತೀಕರಿಸಿದ ಪೊಲೀಸ್ ಕಾನ್ಸ್‌ಟೇಬಲ್‌ಗಳ ಹುದ್ದೆಯನ್ನು ಮರು ಸೃಜಿಸತಕ್ಕುದಲ್ಲ.
2. ಪೊಲೀಸ್ ಕಾನ್ಸ್‌ಟೇಬಲ್ ಮತ್ತು ಪೊಲೀಸ್ ಹೆಡ್ ಕಾನ್ಸ್‌ಟೇಬಲ್‌ಗಳ ಎರಡು ವೃಂದಗಳ ಒಟ್ಟು ಬಲದಲ್ಲಿ ಯಾವುದೇ ಹೆಚ್ಚಳ ಮಾಡತಕ್ಕುದಲ್ಲ.

   ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಅಇ 2150 ಸೇ–3/2009 ದಿನಾಂಕ : 25–01–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 969

**(ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀಮತಿ ಎಂ. ಸಾವಿತ್ರಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು (ಸ್ವತಂತ್ರ ಪ್ರಭಾರ), ಸಿ.ಜೆ.ಎಂ. ನ್ಯಾಯಾಲಯ, ಶಿವಮೊಗ್ಗ (ಪ್ರಸ್ತುತ ಅಮಾನತ್ತಿನಲ್ಲಿರುವವರು) ಇವರನ್ನು ಸೇವೆಗೆ ಪುನರ್ ನಿಯುಕ್ತಿಗೊಳಿಸುವ ಕುರಿತು.

**ಓದಲಾಗಿದೆ** : 1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ನಂ. ಡಿಪಿಎನ್/ಸಿಶಾ–1/99/2009–10, ದಿನಾಂಕ 10–07–2009.

2. ಸರ್ಕಾರದ ಆದೇಶ ಸಂಖ್ಯೆ : ಒಇ 339 ಪಿಪಿಇ 2009, ದಿನಾಂಕ 01–08–2009

3. ಸರ್ಕಾರದ ಆದೇಶ ಸಂಖ್ಯೆ : ಒಇ 339 ಪಿಪಿಇ 2009, ದಿನಾಂಕ 26–12–2009

4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜಗಳ ಇಲಾಖೆ, ಬೆಂಗಳೂರು ಇವರ ಪತ್ರ ನಂ. ಡಿಪಿಎನ್/ಸಿಶಾ–1/99/2009–10, ದಿನಾಂಕ 03–02–2010.

**ಪ್ರಸ್ತಾವನೆ :**

ಶ್ರೀಮತಿ ಎಂ. ಸಾವಿತ್ರಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು (ಸ್ವತಂತ್ರ ಪ್ರಭಾರ), (ಪ್ರಸ್ತುತ ಅಮಾನತ್ತಿನಲ್ಲಿರುವವರು) ಇವರು ಸಿ.ಜೆ.ಎಂ. ನ್ಯಾಯಾಲಯ, ಶಿವಮೊಗ್ಗ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಶಿವಮೊಗ್ಗ ಗ್ರಾಮಾಂತರ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ : 244/2009ರಲ್ಲಿ ಆರೋಪಿಯ ಜಾಮೀನು ಅರ್ಜಿಗೆ ತಕರಾರು ಸಲ್ಲಿಸಲು ಶ್ರೀ ಎಂ. ಲೋಕೇಶ್ ಈಸನೂರು, ನ್ಯಾಯವಾದಿಗಳು, ಶಿವಮೊಗ್ಗ ಇವರಿಂದ ರೂ. 500/– ಲಂಚ ಪಡೆಯುವಾಗ ಶಿವಮೊಗ್ಗ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿಬಿದ್ದರೆಂಬ ಆಧಾರದ ಮೇಲೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜಗಳ ಇಲಾಖೆ ಇವರು ಮೇಲೆ ಓದಲಾದ (1)ರ ದಿನಾಂಕ 10–07–2009ರ ಪತ್ರದಲ್ಲಿ ಸದರಿ ಅಧಿಕಾರಿಯವರನ್ನು ಅಮಾನತ್ತಿನಲ್ಲಿಡುವಂತೆ ಶಿಫಾರಸ್ಸು ಮಾಡಿದ್ದರು. ಆ ಪ್ರಕಾರ ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಎ)ರ ರೀತ್ಯಾ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿ ಇರಿಸಲಾಗಿತ್ತು.

ಶ್ರೀಮತಿ ಎಂ. ಸಾವಿತ್ರಿ ಇವರ ವಿರುದ್ಧ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಲಂಚ ನಿರೋಧಕ ಕಾಯ್ದೆ 1988ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಅನುಮತಿ ನೀಡಲಾಗಿರುತ್ತದೆ.

ಶ್ರೀಮತಿ ಎಂ. ಸಾವಿತ್ರಿ ಇವರ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ಪುನರ್ ನೇಮಕ ಮಾಡುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಕರಣದಲ್ಲಿ ತನಿಖೆಯು ಸಂಪೂರ್ಣವಾಗಿರುವುದರಿಂದ ಮತ್ತು ಸದರಿ ಅಧಿಕಾರಿಯವರನ್ನು ಕರ್ನಾಟಕ ಲೋಕಾಯುಕ್ತರು ಸಕ್ಷಮ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲು ಸರ್ಕಾರವು ಅನುಮತಿ ನೀಡಿರುವ ಹಿನ್ನೆಲೆಯಲ್ಲಿ ಶ್ರೀಮತಿ ಎಂ. ಸಾವಿತ್ರಿ ಅವರ ಅಮಾನತ್ತನ್ನು ರದ್ದುಪಡಿಸಿ, ಸೇವೆಗೆ ಪುನರ್ ನೇಮಿಸುವುದು ಸಮಂಜಸವಾಗಿ ಕಂಡುಬಂದಿರುವುದರಿಂದ ಈ ಆದೇಶ.

**ಸರ್ಕಾರದ ಅದೇಶ ಸಂಖ್ಯೆ : ಒಇ 38 ಪಿಪಿಇ 2010, ಬೆಂಗಳೂರು, ದಿನಾಂಕ : 8ನೇ ಏಪ್ರಿಲ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಶ್ರೀಮತಿ ಎಂ. ಸಾವಿತ್ರಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು (ಸ್ವತಂತ್ರ ಪ್ರಭಾರ), (ಪ್ರಸ್ತುತ ಅಮಾನತ್ತಿನಲ್ಲಿರುವವರು) ಇವರ ವಿರುದ್ಧ ಮೊಕದ್ದಮೆ/ಇಲಾಖಾ ವಿಚಾರಣೆ ಬಾಕಿ ಇರಿಸಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳ 10ನೇ ನಿಯಮದ 5ನೇ ಉಪನಿಯಮ (ಸಿ) ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಶ್ರೀಮತಿ ಎಂ. ಸಾವಿತ್ರಿ ಇವರ ಅಮಾನತ್ತನ್ನು ರದ್ದುಪಡಿಸಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಚಿಕ್ಕಮಗಳೂರು ಇಲ್ಲಿ ಖಾಲಿ ಇರುವ ಹುದ್ದೆಗೆ ಪುನರ್‌ನಿಯುಕ್ತಿಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 970

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ,
(ಕಾ ಮತ್ತು ಸು, ಕಾಪಿಪೋಸಾ ಮತ್ತು ಅಭಿಯೋಗಗಳು)

## ಮೂಲ ಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : 32 ರಾಅವಿ 2004 ದಿನಾಂಕ 20–03–2007
2. ಸರ್ಕಾರದ ಆದೇಶ ಸಂಖ್ಯೆ : 32 ರಾಅವಿ 2004 ದಿನಾಂಕ 07–05–2007
3. ಸರ್ಕಾರದ ಪತ್ರ ಸಂಖ್ಯೆ : ಮೂಅಇ 23 ರಾಅವಿ 2008 ದಿನಾಂಕ 20–12–2008
4. ಸರ್ಕಾರದ ಆದೇಶ ಸಂಖ್ಯೆ : 23 ರಾಅವಿ 2008 ದಿನಾಂಕ 23–05–2009
5. ಸರ್ಕಾರದ ಆದೇಶ ಸಂಖ್ಯೆ : 23 ರಾಅವಿ 2008 ದಿನಾಂಕ 27–11–2009
6. ಜಿಲ್ಲಾಧಿಕಾರಿ, ಧಾರವಾಡ ಜಿಲ್ಲೆ ಇವರ ದಿನಾಂಕ 10–03–2010ರ ಪತ್ರ ಸಂಖ್ಯೆ : DC/PA/CR-52/2009-10

**ಪ್ರಸ್ತಾವನೆ :**

ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರ (AAI) ತಯಾರಿಸಿ ಅನುಷ್ಠಾನಗೊಳಿಸಲು ನಿರ್ಧರಿಸಿರುವ ದೀರ್ಘಾವಧಿ ಕ್ರಿಯಾ ಯೋಜನೆ ಪ್ರಕಾರ 650 ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಂಡು ಹುಬ್ಬಳ್ಳಿ ವಿಮಾನ ನಿಲ್ದಾಣವನ್ನು ಅಭಿವೃದ್ಧಿಪಡಿಸಲು ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದೆ.

2. ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿ ಹಾಗೂ ಸದರಿ ವಿಮಾನ ನಿಲ್ದಾಣದ ವಿಸ್ತರಣೆಗೆ ಅಗತ್ಯವಾದ ಭೂಸ್ವಾಧೀನಕ್ಕಾಗಿ ರೂ. 20.00 ಕೋಟಿಗಳನ್ನು ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

3. ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿ ಹಾಗೂ ಮುಖ್ಯ ಕಾರ್ಯದರ್ಶಿಗಳ ಸಮ್ಮುಖದಲ್ಲಿ ಏರ್ಪಟ್ಟ ಸಭೆಯ ನಿರ್ಧಾರದಂತೆ, ಹುಬ್ಬಳ್ಳಿ ವಿಮಾನ ನಿಲ್ದಾಣಕ್ಕೆ ಅಗತ್ಯವಾದ ಭೂಸ್ವಾಧೀನ ವೆಚ್ಚದ ಅರ್ಧ ಪಾಲನ್ನು ಕೆಐಎಡಿಬಿ ಯಿಂದ ಭರಿಸುವಂತೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರದಲ್ಲಿ ಸೂಚಿಸಿ, ಭೂ ನಿವಾಸಿಗಳ ಮಾಲೀಕರಿಗೆ ಪರಿಹಾರ ಪಾವತಿಗಾಗಿ ರೂ. 3.31 ಕೋಟಿಗಳನ್ನು ಧಾರವಾಡ ಜಿಲ್ಲಾಧಿಕಾರಿಯವರಿಗೆ ಬಿಡುಗಡೆ ಮಾಡುವಂತೆ ಹಾಗೂ ಇದಕ್ಕೆ ಬದಲಾಗಿ ಕೆಐಎಡಿಬಿ 60 ಎಕರೆ ಭೂ ಪ್ರದೇಶವನ್ನು ಅವರ ವಾಣಿಜ್ಯಾತ್ಮಕ ಅಭಿವೃದ್ಧಿಗಾಗಿ ನೀಡುವುದಾಗಿ ತಿಳಿಸಲಾಗಿದ್ದಿತು.

4. ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 23–05–2009ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ವಿಸ್ತರಣೆಯ ವ್ಯಾಪ್ತಿಯಲ್ಲಿ ಬರುವ ಕೈಗಾರಿಕಾ ಪ್ರದೇಶದ ಭೂಮಿಯನ್ನು ಸ್ವಾಧೀನಪಡಿಸಿಕೊಂಡು ಭೂ ಮಾಲೀಕರಿಗೆ ಪರಿಹಾರ ಧನವನ್ನು ಪಾವತಿಸಲು ರೂ. 20.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

5. ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 27–11–2009ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಅವಶ್ಯವಿರುವ ರೂ. 25.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

6. ಈಗ ಜಿಲ್ಲಾಧಿಕಾರಿಗಳು, ಧಾರವಾಡ ಇವರು ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಪತ್ರ ದಿನಾಂಕ 10–03–2010ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪರಿಹಾರ ಪಾವತಿಸುವ ಸಲುವಾಗಿ ಈಗಾಗಲೇ ಬಿಡುಗಡೆ ಮಾಡಿರುವ ಒಟ್ಟು ಮೊತ್ತ ರೂ. 45.00 ಕೋಟಿಗಳು ಸಂಪೂರ್ಣವಾಗಿ ಬಳಕೆಯಾಗಿರುವುದರಿಂದ ಈಗ ಅವಶ್ಯವಿರುವ ರೂ. 50.00 ಕೋಟಿಗಳನ್ನು ಹೆಚ್ಚುವರಿಯಾಗಿ ಕೂಡಲೇ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

7. ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 23 ರಾಅವಿ 2008, ಬೆಂಗಳೂರು, ದಿನಾಂಕ : 26–03–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪರಿಹಾರ ಪಾವತಿಸುವ ಸಲುವಾಗಿ ರೂ. 20.00 ಕೋಟಿಗಳನ್ನು (ರೂ. ಇಪ್ಪತ್ತು ಕೋಟಿಗಳು) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2. ಈ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 5465–01–190–1–05–133 ರಡಿಯಲ್ಲಿ ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿಗಾಗಿ ಒದಗಿಸಿರುವ ಮೊತ್ತ ರೂ. 60.00 ಕೋಟಿಗಳಿಂದ ಭರಿಸತಕ್ಕದ್ದು.

3. ಈ ಮೊತ್ತವನ್ನು ಜಿಲ್ಲಾಧಿಕಾರಿಗಳು ಧಾರವಾಡ ಜಿಲ್ಲೆ, ಧಾರವಾಡ ಇವರು ಪೇಯೀಸ್ ರಸೀತಿ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು, ಇಲ್ಲಿ ತೆಗೆಯುವುದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 587 ವೆಚ್ಚ–1/2010 ದಿನಾಂಕ 25–03–2010ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 983

**ಎನ್. ಮಂಜುಳ ಗೀತ**
ಸರ್ಕಾರದ ಅಧೀನ ಕಾರ್ಯದರ್ಶಿ
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

**ಉನ್ನತ ಶಿಕ್ಷಣ ಸಚಿವಾಲಯ**

**ವಿಷಯ :** ಕಾಳಗಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಹೆಸರನ್ನು " ಶ್ರೀ ಜಗದ್ಗುರು ರೇವಣಸಿದ್ದೇಶ್ವರ ಶ್ರೀಮತಿ ನಾಗರತ್ನಮ್ಮ ಶಿವಶರಣಪ್ಪ ಕಮಲಾಪುರ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಾಳಗಿ" ಎಂದು ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ :** ಕಾಲೇಜು ಶಿಕ್ಷಣ ನಿರ್ದೇಶಕರವರ ಪತ್ರ ಸಂಖ್ಯೆ ಕಾಶಿಇ 45 ಯೋಜನೆ 2007–08 ದಿನಾಂಕ 13–10–2009.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲ್ಲೂಕು ಕಾಳಗಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಸ್ವಂತ ಕಟ್ಟಡ ನಿರ್ಮಾಣಕ್ಕಾಗಿ ಶ್ರೀಮತಿ ನಾಗರತ್ನಮ್ಮ ಶಿವಶರಣಪ್ಪ ಕಮಲಾಪುರ ಇವರು 4.00 ಎಕರೆ ಜಮೀನನ್ನು ದಾನವಾಗಿ ನೀಡಿರುವುದರಿಂದ ಕಾಲೇಜಿಗೆ ಅವರ ಅಪೇಕ್ಷೆಯಂತೆ " ಶ್ರೀ ಜಗದ್ಗುರು ರೇವಣಸಿದ್ದೇಶ್ವರ ಶ್ರೀಮತಿ ನಾಗರತ್ನಮ್ಮ ಶಿವಶರಣಪ್ಪ ಕಮಲಾಪುರ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಾಳಗಿ" ಎಂದು ನಾಮಕರಣ ಮಾಡಿ ಆದೇಶ ಹೊರಡಿಸುವಂತೆ ನಿರ್ದೇಶಕರು, ಕಾಲೇಜು ಶಿಕ್ಷಣ ಇವರ ಪ್ರಸ್ತಾವನೆಯಲ್ಲಿ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 383 ಯೋಯೋಕ 2009 ಬೆಂಗಳೂರು, ದಿನಾಂಕ 16–02–2010**

ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲ್ಲೂಕು ಕಾಳಗಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡಕ್ಕಾಗಿ ಜಮೀನನ್ನು ದಾನವಾಗಿ ನೀಡಿದ್ದು ಅವರ ಅಪೇಕ್ಷೆಯಂತೆ ಕಾಲೇಜಿಗೆ " ಶ್ರೀ ಜಗದ್ಗುರು ರೇವಣಸಿದ್ದೇಶ್ವರ ಶ್ರೀಮತಿ ನಾಗರತ್ನಮ್ಮ ಶಿವಶರಣಪ್ಪ ಕಮಲಾಪುರ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಾಳಗಿ" ಎಂದು ನಾಮಕರಣ ಮಾಡಲು ಸರ್ಕಾರಿ ಆದೇಶ ಸಂಖ್ಯೆ ಇಡಿ 51 ಯೊಸಕ 89 ಬೆಂಗಳೂರು, ದಿನಾಂಕ 30–08–1989ರ ಆದೇಶಕ್ಕೆ ಷರತ್ತಿಗೊಳಪಟ್ಟು ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರಿಗೆ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 984

**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಉನ್ನತ ಶಿಕ್ಷಣ ಇಲಾಖೆ, (ಯೋಜನೆ)

**ಶಿಕ್ಷಣ ಸಚಿವಾಲಯ**

**ಸಂಖ್ಯೆ : ಇಡಿ 223 ಪಿಬಿಎಸ್ 2010, ಬೆಂಗಳೂರು, ದಿನಾಂಕ 29–03–2010**

## ಸುತ್ತೋಲೆ

**ವಿಷಯ :** ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ವಿದ್ಯಾರ್ಥಿಗಳ ದಾಖಲಾತಿಮಟ್ಟ ಕಡಿಮೆಯಾಗುತ್ತಿರುವ ಬಗ್ಗೆ.

ನಗರದಲ್ಲಿನ ಜನಸಂಖ್ಯೆ ದಿನೇ ದಿನೇ ಹೆಚ್ಚಾಗುತ್ತಿದ್ದರೂ ಸಹ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ವಿದ್ಯಾರ್ಥಿಗಳ ದಾಖಲಾತಿ ಮಟ್ಟ ಮಾತ್ರ ಕಡಿಮೆಯಾಗುತ್ತಿದೆ. ಈ ಸಂಬಂಧವಾಗಿ ಅವಲೋಕಿಸಿದಾಗ ಪಾಲಕರು ಹಾಗೂ ಸಾರ್ವಜನಿಕರನ್ನು ಸರ್ಕಾರಿ ಶಾಲೆಗಳು ಆಕರ್ಷಿಸಲು ವಿಫಲವಾಗುತ್ತಿರುವುದರ ದ್ಯೋತಕವಿದು ಎಂದು ಭಾವಿಸಿದೆ. ಆದ್ದರಿಂದ,

ನಗರ ಪ್ರದೇಶದಲ್ಲಿನ ಸರ್ಕಾರಿ ಶಾಲೆಗಳಲ್ಲಿ ಮಕ್ಕಳ ಸಂಖ್ಯೆ ಗಣನೀಯವಾಗಿ ಕುಸಿದಲ್ಲಿ ಅದಕ್ಕೆ ಸಂಬಂಧಿಸಿದ ಶಾಲಾ ಸಿಬ್ಬಂದಿಗಳನ್ನು ಜವಾಬ್ದಾರರನ್ನಾಗಿಸಲಾಗುವುದು.

ಇಲಾಖಾ ಮುಖ್ಯಸ್ಥರು ಜವಾಬ್ದಾರಿ ನಿಗಧಿಗೊಳಿಸಲು ಅಗತ್ಯವಾದ ಮಾರ್ಗಸೂಚಿಯನ್ನು ಹೊರಡಿಸಲು ಕೋರಿದೆ.

ಪಿ.ಆರ್. 985

**ಎಂ. ಪ್ರಭುಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ, (ಪ್ರಾಥಮಿಕ)

## ಶಿಕ್ಷಣ ಸಚಿವಾಲಯ

**ವಿಷಯ :** ರಾಜ್ಯದಲ್ಲಿ 6ನೇ ತರಗತಿಯಿಂದ ತುಳುವನ್ನು ತೃತೀಯ ಭಾಷೆಯನ್ನಾಗಿ ಪರಿಗಣಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ರವರ ದಿ : 16–02–2010ರ ಪತ್ರ ಸಂಖ್ಯೆ ಡಿಎಸ್‌ಇಆರ್‌ಟಿ/ಇವಿಜಿ/ತುಪಪು/01/2008–09.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 16–02–2010ರ ಪತ್ರದಲ್ಲಿ ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ಇವರು 6ನೇ ತರಗತಿಯಿಂದ ತುಳುವನ್ನು ತೃತೀಯ ಭಾಷೆಯನ್ನಾಗಿ ಅಳವಡಿಸುವ ಬಗ್ಗೆ ಪ್ರಸ್ತಾಪಿಸಿರುತ್ತಾರೆ. ತುಳುವಿಗೆ ಪ್ರತ್ಯೇಕ ಕರ್ನಾಟಕ ತುಳು ಸಾಹಿತ್ಯ ಅಕಾಡಮಿ ಅಸ್ತಿತ್ವದಲ್ಲಿದ್ದು. 1994ರಿಂದ ಕಾರ್ಯನಿರ್ವಹಿಸುತ್ತಾ ಬಂದಿದೆ. 1994 ರಿಂದೀಚೆಗೆ ಸುಮಾರು 110 ತುಳು ಗ್ರಂಥಗಳನ್ನು ಕನ್ನಡ ಭಾಷೆಯಲ್ಲಿ ಪ್ರಕಟಿಸಿರುವುದಾಗಿ, ಹಾಗೂ ತುಳುವಿಗೆ ತಮ್ಮದೇ ಆದ ಇತಿಹಾಸವಿದ್ದು, ಪ್ರಸ್ತುತ ಮಂಗಳೂರು ವಿಶ್ವವಿದ್ಯಾನಿಲಯವು ಕನ್ನಡ ಸ್ನಾತಕ್ಕೋತ್ತರ ಪದವಿಗೆ ತುಳು ಸಂಸ್ಕೃತಿಯನ್ನು ಒಂದು ವಿಷಯವನ್ನಾಗಿ ಸ್ವೀಕರಿಸಿದ ಬಗ್ಗೆ ಪ್ರಸ್ತಾಪಿಸಿರುತ್ತಾರೆ. ಜೊತೆಗೆ ಈಗಾಗಲೇ ರಾಜ್ಯದಲ್ಲಿ ತೃತೀಯ ಭಾಷೆಯನ್ನಾಗಿ ಕಲಿಯಲು ಕನ್ನಡ, ಆಂಗ್ಲ, ಹಿಂದಿ, ಅರಬ್ಬಿ, ಪರ್ಶಿಯನ್, ಸಂಸ್ಕೃತ ಹಾಗೂ ಕೊಂಕಣಿ ಭಾಷೆಗಳಲ್ಲಿ ಅನುವು ಮಾಡಿಕೊಡಲಾಗಿದೆ. ಕರಾವಳಿ ಜಿಲ್ಲೆಗಳಾದ ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳಲ್ಲಿ ತುಳು ಮಾತನಾಡುವವರು ಅಧಿಕ ಸಂಖ್ಯೆಯಲ್ಲಿದ್ದು ತುಳು ಬಹುತೇಕರ ಮಾತೃ ಭಾಷೆಯಾಗಿದೆ. ಈ ಹಿನ್ನೆಲೆಯಲ್ಲಿ ರಾಜ್ಯದಲ್ಲಿ 6ನೇ ತರಗತಿಯಿಂದ ತುಳುವನ್ನು ತೃತೀಯ ಭಾಷೆಯನ್ನಾಗಿ 2010–11ನೇ ಸಾಲಿನಿಂದ ಕಲಿಯಲು ಅವಕಾಶ ಮಾಡಿಕೊಡಬಹುದಾಗಿದ್ದು, ಈ ಸಂಬಂಧವಾಗಿ ಆದೇಶ ಹೊರಡಿಸುವಂತೆ ಕೋರಿರುವರು. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 380 ಎಲ್‌ಐಬಿ 2009 ಬೆಂಗಳೂರು, ದಿನಾಂಕ 26–03–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ತುಳು ಮಾತನಾಡುವವರು ಅಧಿಕ ಸಂಖ್ಯೆಯಲ್ಲಿರುವ ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳಿಗೆ ಸೀಮಿತಗೊಳಿಸಿ ತುಳುವನ್ನು ತೃತೀಯ ಭಾಷೆಯನ್ನಾಗಿ ಕಲಿಯಲು 2010–11ನೇ ಶೈಕ್ಷಣಿಕ ವರ್ಷದಿಂದ ಅಳವಡಿಸಲು ಅನುಮೋದಿಸಿ ಆದೇಶಿಸಿದೆ. ಹಾಗೂ ಈ ಸಂಬಂಧವಾಗಿ ಪಠ್ಯವಸ್ತು ಹಾಗೂ ಪಠ್ಯ ರಚನೆ ಮಾಡಿ ಅಗತ್ಯ ಕ್ರಮವನ್ನು ಕೂಡಲೇ ಜರುಗಿಸಲು ಸಹ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 986

**ಎಂ.ಎನ್. ಸೋಮಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಂ.ಎಸ್. ಸುರೇಶ್ ಬಾಬು, ಮುಖ್ಯ ಅಧೀಕ್ಷಕರು, ಕರ್ನಾಟಕ ಕಾರಾಗೃಹಗಳ ಇಲಾಖೆ, ಇವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಿ, ಕರ್ತವ್ಯಕ್ಕೆ ತೆಗೆದುಕೊಳ್ಳುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 36 ಪಿಆರ್‌ಇ 2007 ದಿನಾಂಕ 09-05-2007.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 25 ಪಿಆರ್‌ಇ 2007 ದಿನಾಂಕ 03-10-2007.
3) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 36 ಪಿಆರ್‌ಎ 2007 ದಿನಾಂಕ 28-08-2008.
4) ಶ್ರೀ ಎಂ.ಎಸ್. ಸುರೇಶ್‌ಬಾಬು, ಮುಖ್ಯ ಅಧೀಕ್ಷಕರು (ಅಮಾನತ್ತಿನಲ್ಲಿರುವ), ಇವರ ಮನವಿ ದಿನಾಂಕ 16-07-2008, 14-10-2009 ಮತ್ತು 08-12-2009.
5) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾನಿರೀಕ್ಷಕರವರ ಪತ್ರ ಸಂಖ್ಯೆ: ವಿಚಾರಣೆ/ಸಿಆರ್-06/2007-08 ದಿನಾಂಕ 30-08-2009 ಮತ್ತು 07-01-2010.
6) ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 76 ಪಿಆರ್‌ಇ 2009 ದಿನಾಂಕ 12/15-03-2010.

**ಪ್ರಸ್ತಾವನೆ :**

ಶ್ರೀ ಎಂ.ಎಸ್. ಸುರೇಶ್‌ಬಾಬು ರವರು ಮುಖ್ಯ ಅಧೀಕ್ಷಕರಾಗಿ ಮೈಸೂರು ಕೇಂದ್ರ ಕಾರಾಗೃಹದಲ್ಲಿ ಸೇವೆ ಸಲ್ಲಿಸುತ್ತಿದ್ದರು. ಆಗ, ಸದರಿ ಕಾರಾಗೃಹಕ್ಕೆ ಔಷಧ ಸರಬರಾಜು ಮಾಡಿದ ಬಾಬ್ತು ಹಣವನ್ನು ಸರಬರಾಜುದಾರರಿಗೆ ಪಾವತಿಸುವ ವೇಳೆಯಲ್ಲಿ ಲಂಚ ಪಡೆಯುತ್ತಿದ್ದಾಗ ಲೋಕಾಯುಕ್ತರವರು ಬೀಸಿದ ಬಲೆಗೆ ಸಿಲುಕಿದರು.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎಂ.ಎಸ್. ಸುರೇಶ್‌ಬಾಬು, ಮುಖ್ಯ ಅಧೀಕ್ಷಕರು, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ನಿಯಮ 10(1)(ಎ)ರ ಅನ್ವಯ ಅಮಾನತ್ತಿನಲ್ಲಿರಿಸಿ ಆದೇಶಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ, ಶ್ರೀ ಎಂ.ಎಸ್. ಸುರೇಶ್‌ಬಾಬು, ಮುಖ್ಯ ಅಧೀಕ್ಷಕರ ಹುದ್ದೆಯ ಲೀನ್ ಅನ್ನು ಬಳ್ಳಾರಿ ಕೇಂದ್ರ ಕಾರಾಗೃಹಕ್ಕೆ ವರ್ಗಾಯಿಸಲಾಗಿರುತ್ತದೆ. ಹಾಲಿ ಅಲ್ಲಿಯೇ ಇರುತ್ತದೆ.

ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ, ಶ್ರೀ ಎಂ.ಎಸ್. ಸುರೇಶ್‌ಬಾಬುರವರನ್ನು ಲಂಚ ನಿರೋಧಕ ಕಾಯ್ದೆ 1958ರ ಕಲಂ 7, 13(1)(ಡಿ) ಸಹವಾಚ ಕಲಂ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಅಮಾನತ್ತಿಗೊಳಪಟ್ಟ ಶ್ರೀ ಎಂ.ಎಸ್. ಸುರೇಶ್‌ಬಾಬುರವರು, ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾನಿರೀಕ್ಷಕರವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿದ ಮೇಲೆ (4)ರಲ್ಲಿ ಓದಲಾದ ಮನವಿಗಳಲ್ಲಿ, ಅಮಾನತ್ತಿನಲ್ಲಿರಿಸಿ ಎರಡು ವರ್ಷಗಳ ಮೇಲಾಗಿರುತ್ತದೆ. ದಿನಾಂಕ 31-12-2010 ರಂದು ವಯೋನಿವೃತ್ತಿ ಹೊಂದಲಿದ್ದು, ಇನ್ನುಳಿದ ಅವಧಿಯಲ್ಲಾದರೂ ಕರ್ತವ್ಯ ನಿರ್ವಹಿಸಲು ಸಾಧ್ಯವಾಗುವಂತೆ ದಯಮಾಡಿ ಅಮಾನತ್ತಿನ ಆದೇಶವನ್ನು ರದ್ದುಗೊಳಿಸಿ, ಕೂಡಲೇ ಕರ್ತವ್ಯಕ್ಕೆ ತೆಗೆದುಕೊಳ್ಳುವಂತೆ ಕೋರಿರುತ್ತಾರೆ.

ಈ ಕೋರಿಕೆಯ ಹಿನ್ನೆಲೆಯಲ್ಲಿ ಎಡಿಜಿಪಿ (ಪ್ರಿಜನ್ಸ್) ರವರು ಸರ್ಕಾರಕ್ಕೆ ಬರೆದ ಮೇಲೆ (5)ರಲ್ಲಿ ಓದಲಾದ ಪತ್ರಗಳಲ್ಲಿ ಶ್ರೀ ಎಂ.ಎಸ್. ಸುರೇಶ್‌ಬಾಬು ರವರ ವಿರುದ್ಧ ಇರುವ ಕ್ರಿಮಿನಲ್ ಮೊಕದ್ದಮೆ ಹಾಗು ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅವರ ಅಮಾನತ್ತನ್ನು ರದ್ದುಪಡಿಸಿ ಕರ್ತವ್ಯಕ್ಕೆ ತೆಗೆದುಕೊಳ್ಳುವ ಬಗ್ಗೆ ಗೌ. ಕರ್ನಾಟಕ ಲೋಕಾಯುಕ್ತರವರ ಅಭಿಪ್ರಾಯ ಕೋರಲಾಗಿ ಗೌ. ಕರ್ನಾಟಕ ಲೋಕಾಯುಕ್ತರವರು ದಿನಾಂಕ 06-08-2008ರಂದು ಬರೆದ ಪತ್ತದಲ್ಲಿ, ಸದರಿ ವಿಷಯಕ್ಕೆ ಸಂಬಂಧಪಟ್ಟಂತೆ ಸೂಕ್ತವೆನಿಸುವ ನಿರ್ಧಾರವನ್ನು ತೆಗೆದುಕೊಳ್ಳಬಹುದಾಗಿದೆ ಎಂದು ತಿಳಿಸಿರುತ್ತಾರೆ ಎಂಬ ಅಂಶವನ್ನು ತಿಳಿಸುತ್ತಾ, ಸದರಿಯವರ ಅಮಾನತ್ತನ್ನು ರದ್ದುಪಡಿಸುವಂತೆ ಶಿಫಾರಸ್ಸುಗೊಳಿಸಿ, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ (6)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ, ಬೆಂಗಳೂರು ಕೇಂದ್ರ ಕಾರಾಗೃಹದಲ್ಲಿದ್ದ ಮುಖ್ಯ ಅಧೀಕ್ಷಕರ ಹುದ್ದೆಯನ್ನು ಆಡಳಿತಾತ್ಮಕ ಅವಶ್ಯಕತೆಯ ಮೇರೆಗೆ ಬೆಂಗಳೂರಿನಲ್ಲಿರುವ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾನಿರೀಕ್ಷಕರವರ ಕಛೇರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸ್ಥಳಾಂತರಿಸಲಾಗಿದೆ.

ಶ್ರೀ ಎಂ.ಎಸ್. ಸುರೇಶ್‌ಬಾಬು ರವರು ಸರ್ಕಾರಕ್ಕೆ ಸಲ್ಲಿಸಿದ ಮನವಿಗಳಲ್ಲಿನ ಕೋರಿಕೆಯನ್ನು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾನಿರೀಕ್ಷಕರವರ ಪ್ರಸ್ತಾವನೆಯ ಹಿನ್ನೆಲೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 36 ಪಿಆರ್‌ಇ 2007, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2010**

ಶ್ರೀ ಎಂ.ಎಸ್. ಸುರೇಶ್‌ಬಾಬು, ಹಾಲಿ ಅಮಾನತ್ತಿನಲ್ಲಿರುವ ಮುಖ್ಯ ಅಧೀಕ್ಷಕರು, ಕರ್ನಾಟಕ ಕಾರಾಗೃಹಗಳ ಇಲಾಖೆ, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(5)(ಸಿ)ರ ಅನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅಮಾನತ್ತಿನಿಂದ ಬಿಡುಗಡೆಗೊಳಿಸಿ, ಬೆಂಗಳೂರಿನ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾನಿರೀಕ್ಷಕರವರ ಕಛೇರಿಯಲ್ಲಿರುವ ಮುಖ್ಯ ಅಧೀಕ್ಷಕರ ಹುದ್ದೆಯಲ್ಲಿ ನೇಮಿಸಲಾಗಿದೆ.

1. ಶ್ರೀ ಸುರೇಶ್‌ಬಾಬುರವರ ವಿರುದ್ಧ ಇರುವ ಕ್ರಿಮಿನಲ್ ಮೊಕದ್ದಮೆಯಲ್ಲಿ ಮುಂದೆ ಜರುಗತಕ್ಕ ವಿಚಾರಣೆಯನ್ನು ಕಾಯ್ದಿರಿಸಿದೆ.
2. ಸದರಿ ಕ್ರಿಮಿನಲ್ ಮೊಕದ್ದಮೆಯಲ್ಲಿ ಗೌ. ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಬದ್ಧವಾಗತಕ್ಕದ್ದು.
3. ತತ್ಸಂಬಂಧದಲ್ಲಿ ಮುಂದೆ ಸರ್ಕಾರವು ನೀಡುವ ಯಾವುದೇ ಆದೇಶಕ್ಕೆ ಬದ್ಧವಾಗತಕ್ಕದ್ದು.
4. ಶ್ರೀ ಸುರೇಶ್‌ಬಾಬು, ಮುಖ್ಯ ಅಧೀಕ್ಷಕರು, ಇವರ ಮೇಲಿನ ಷರತ್ತುಗಳಿಗೆ ಒಪ್ಪಿ, ಒಪ್ಪಿಗೆ ಪತ್ರ ಬರೆದುಕೊಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.799

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಮೆಹಬೂಬ್ ಖಾನ್, ಜಿಲ್ಲಾ ನೋಂದಣಾಧಿಕಾರಿ, ಶಿವಾಜಿನಗರ ನೋಂದಣಿ ಜಿಲ್ಲೆ, ಬೆಂಗಳೂರು, ಇವರನ್ನು ಇವರ ವಿರುದ್ಧದ ಲಂಚ ಪ್ರಕರಣದ ಹಿನ್ನೆಲೆಯಲ್ಲಿ ಅಮಾನತ್ತಿನಲ್ಲಿಡುವ ಬಗ್ಗೆ-ಆದೇಶ.

**ಓದಲಾಗಿದೆ:**
1. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಇವರ ಪತ್ರ ಸಂಖ್ಯೆ: ಲೋಕ್/ಐಎನ್ ವಿ(ಜಿ)ಸಿಟಿ/ಕ್ರೈ. 06/2010 ದಿನಾಂಕ: 05-02-2010.
2. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಅಧಿಕೃತ ಜ್ಞಾಪನ ಸಂಖ್ಯೆ: ಇವಿ-(1)-24/09-10 ದಿನಾಂಕ: 04-02-2010 ಹಾಗೂ ಪತ್ರ ಸಂಖ್ಯೆ: ಇವಿ-(1)24/09-10 ದಿನಾಂಕ 06-02-2009.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಪ್ರಕರಣದ ಫಿರ್ಯಾದುದಾರರಾದ ಶ್ರೀ ಅಸಿಮ್ ಜೈನ್, ಬಸಪ್ಪನ ಪಾಳ್ಯ, ತಾತ್‌ಗುಣಿ ಅಂಚೆ, ಬೆಂಗಳೂರು ಇವರು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಅವರು ಮತ್ತು ಕುಟುಂಬದವರು ಅಲಯನ್ಸ್ ಇನ್‌ಫ್ರಾಸ್ಟ್ರಕ್ಚರ್ ಪ್ರೈವೇಟ್ ಲಿಮಿಟೆಡ್ ಇವರಿಂದ ಸ್ವತ್ತನ್ನು ಖರೀದಿಸಿ ಖರೀದಿ ಮೌಲ್ಯದ ಶೇಕಡಾ 40 ರಷ್ಟು ಹಣವನ್ನು ಸದರಿ ಕಂಪನಿಗೆ ನೀಡಿ ಮಾರಾಟದ ಕರಾರು ಹಾಗೂ ಮರುಮಾರಾಟದ ಕರಾರುಗಳನ್ನು ಮಾಡಿಕೊಂಡಿದ್ದು,

ಕರಾರಿನಲ್ಲಿ ನಿಗದಿಪಡಿಸಿದ 9 ತಿಂಗಳ ಅವಧಿಯಲ್ಲಿ ಸ್ವತ್ತನ್ನು ಅಭಿವೃದ್ಧಿಪಡಿಸದ ಕಾರಣ ಕಂಪನಿಗೆ ನೀಡಿರುವ ಹಣವನ್ನು ಮರುಪಾವತಿಸುವಂತೆ ಕೇಳಿದ್ದು, ಸದರಿ ಕಂಪನಿಯು ಹಣವನ್ನು ಮರುಪಾವತಿಸದೇ ಚೆಕ್‌ಗಳನ್ನು ನೀಡಿದ್ದು, ಸದರಿ ಚೆಕ್‌ಗಳು ಕಂಪನಿಯ ಖಾತೆಯಲ್ಲಿ ಹಣವಿಲ್ಲದೇ ಬೌನ್ಸ್ ಆಗಿರುತ್ತವೆ. ಈ ವಿಚಾರಕ್ಕೆ ಸಂಬಂಧಿಸಿದಂತೆ, ನ್ಯಾಯಾಲಯದಲ್ಲಿ ಕಲಂ 138 ಎನ್‌ಐ ಕಾಯಿದೆ ಪ್ರಕಾರ ಪ್ರಕರಣವನ್ನು ದಾಖಲಿಸಿದ್ದು, ವಿಚಾರಣೆಯ ವೇಳೆ ಕಂಪನಿಯೊಂದಿಗೆ ಮಾಡಿಕೊಂಡಿದ್ದ ಕರಾರಿನ ಮುದ್ರಾಂಕ ಶುಲ್ಕ ತಲಾ ರೂ. 200 ಗಳ ಬದಲಾಗಿ ಕಡಿಮೆ ಮೊತ್ತಕ್ಕೆ ಇರುವುದು ನ್ಯಾಯಾಧೀಶರ ಮೂಲಕ ಕಂಡುಬಂದಿದ್ದರಿಂದ ಫಿರ್ಯಾದುದಾರರು ತಮ್ಮ ವಕೀಲರ ಮೂಲಕ ಆರೋಪಿತರ ಕಛೇರಿಯಲ್ಲಿ ದಿನಾಂಕ: 28–04–2009 ರಂದು ಅರ್ಜಿ ಸಲ್ಲಿಸಿ ಕಂಪನಿಯೊಂದಿಗೆ ಮಾಡಿಕೊಂಡಿರುವ ಎಲ್ಲಾ 8 ಕರಾರು ಪತ್ರಗಳ ಮುದ್ರಾಂಕ ಶುಲ್ಕವನ್ನು ದಂಡ ಸಮೇತ ಕಟ್ಟಿಸಿಕೊಳ್ಳಬೇಕೆಂದು ಕೋರಿದ್ದು, ಈ ಬಗ್ಗೆ ಆರೋಪಿತರಾದ ಶ್ರೀ ಮೆಹಬೂಬ್ ಖಾನ್, ಜಿಲ್ಲಾ ನೋಂದಣಾಧಿಕಾರಿ, ಶಿವಾಜಿನಗರ ಇವರನ್ನು ಭೇಟಿ ಮಾಡಿ ವಿಚಾರಿಸಿದಾಗ ಸದರಿಯವರು ಪ್ರತಿ ಕಡತಕ್ಕೆ ರೂ. 4,000 ಗಳಂತೆ 8 ಕಡತಗಳಿಗೆ ರೂ. 32,000/– ಲಂಚದ ಹಣಕ್ಕಾಗಿ ಒತ್ತಾಯ ಪಡಿಸಿದ್ದು, ಮಾತುಕತೆಯ ನಂತರ ರೂ. 18,000/– ಗಳಿಗೆ ಒಪ್ಪಿಕೊಂಡಿರುವುದಾಗಿ ಫಿರ್ಯಾದುದಾರರಿಗೆ ಆರೋಪಿತರು ಒತ್ತಾಯಿಸಿದ ಲಂಚದ ಹಣವನ್ನು ಕೊಡಲು ಇಷ್ಟವಿಲ್ಲದ ಕಾರಣ ಆರೋಪಿತರ ವಿರುದ್ಧ ಕಾನೂನು ರೀತಿ ಕ್ರಮ ಕೈಗೊಳ್ಳಲು ಕೋರಿರುತ್ತಾರೆಂದು.

ಸದರಿ ದೂರಿನ ಹಿನ್ನೆಲೆಯಲ್ಲಿ ಪೊಲೀಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ಪೊಲೀಸ್ ಠಾಣೆ ಇವರು ಆರೋಪಿ ಶ್ರೀ ಮೆಹಬೂಬ್ ಖಾನ್, ಜಿಲ್ಲಾ ನೋಂದಣಾಧಿಕಾರಿ, ಶಿವಾಜಿನಗರ ಇವರ ವಿರುದ್ಧ ಲಂಚ ನಿರೋಧ ಕಾಯ್ದೆ, 1988 ರ ಕಲಂ 7, 13(1)(ಡಿ) ಸಹವಾಚನ ಕಲಂ 13 (2) ರನ್ವಯ ದಿನಾಂಕ 03–02–2009 ರಂದು ಮೊಕದ್ದಮೆ ಸಂಖ್ಯೆ: 6/2010 ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆ ಕೈಗೊಂಡಿರುತ್ತಾರೆ. ತನಿಖೆಯ ಸಮಯದಲ್ಲಿ ಆರೋಪಿ ಶ್ರೀ ಮೆಹಬೂಬ್ ಖಾನ್, ಜಿಲ್ಲಾ ನೋಂದಣಾಧಿಕಾರಿ ಇವರು ತಾವು ಒತ್ತಾಯ ಮಾಡಿದ ಲಂಚದ ಹಣ ರೂ. 18,000/– ಗಳನ್ನು ಫಿರ್ಯಾದುದಾರರಿಂದ ಅವರ ಟೈಪಿಸ್ಟ್ ಶ್ರೀ ಕೆ.ಸಿ. ಸಂಪತ್‌ಕುಮಾರ್ ರವರಿಗೆ ಹಣವನ್ನು ತೆಗೆದುಕೊಳ್ಳಲು ತಿಳಿಸಿದ ಮೇರೆಗೆ ಫಿರ್ಯಾದುದಾರರು ಸದರಿಯವರಿಗೆ ಹಣವನ್ನು ನೀಡಿದ್ದು, ಹಣವನ್ನು ತೆಗೆದುಕೊಂಡು ಹೊರಗೆ ಹೋಗಿ ಒಂದೆರಡು ನಿಮಿಷದಲ್ಲೇ ಹಣದೊಂದಿಗೆ ಹಿಂದಿರುಗಿ ಆರೋಪಿತರಿಗೆ ಹಣವನ್ನು ತೋರಿಸಿ ಇದರಲ್ಲಿ ಪೌಡರ್ ಇದೆ ಎಂದು ಹೇಳಿ ಆರೋಪಿತರ ಸೂಚನೆಯಂತೆ ಆರೋಪಿತರ ಟೇಬಲ್ ಮೇಲೆ ಇಟ್ಟಿರುತ್ತಾರೆ. ಶ್ರೀ ಕೆ.ಸಿ. ಸಂಪತ್‌ಕುಮಾರ್ ಇವರನ್ನು ವಿಚಾರಿಸಿದಾಗ ಸದರಿಯವರು ಕಛೇರಿಯಲ್ಲಿ ಶ್ರೀ ಮೆಹಬೂಬ್ ಖಾನ್ ರವರು ಪ್ರತಿ ತಿಂಗಳು ನೀಡುವ ರೂ. 5,500/– ಗಳ ಸಂಬಳಕ್ಕಾಗಿ ಕೆಲಸ ನಿರ್ವಹಿಸುತ್ತಿರುವುದಾಗಿ ತಿಳಿಸಿರುತ್ತಾರೆಂದು;

ಶ್ರೀ ಕೆ.ಸಿ. ಸಂಪತ್‌ಕುಮಾರ್ ರವರ ಎರಡು ಕೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ಮಿಶ್ರಣದ ದ್ರಾವಣದಲ್ಲಿ ಅದ್ದಿಸಿ ತೊಳೆಸಿದಾಗ ಬಣ್ಣ ರಹಿತವಾದ ದ್ರಾವಣಗಳು ತಿಳಿ ಗುಲಾಬಿ ಬಣ್ಣಕ್ಕೆ ತಿರುಗುವುದರ ಮೂಲಕ ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿರುತ್ತದೆ ಹಾಗೂ ಆರೋಪಿತರ ಟೇಬಲ್ ಮೇಲೆ ಹಣ ಇಟ್ಟಿದ್ದ ಜಾಗವನ್ನು ಹತ್ತಿಯಿಂದ ಒರೆಸಿ ಸದರಿ ಹತ್ತಿಯನ್ನು ಹಾಗೂ ಶ್ರೀ ಕೆ.ಸಿ. ಸಂಪತ್‌ಕುಮಾರ್ ರವರು ವಾಷ್ ಬೇಸನ್‌ನಲ್ಲಿ ಕೈತೊಳೆದ ನಂತರ ಒದ್ದೆಯಾಗಿದ್ದ ಭಾಗವನ್ನು ಹತ್ತಿಯಿಂದ ಒರೆಸಿ ಸದರಿ ಹತ್ತಿಯನ್ನು ದ್ರಾವಣದಲ್ಲಿ ಅದ್ದಿದ್ದಾಗ ಮೇಲಿನಂತೆ ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿರುತ್ತದೆಂದು;

ಆರೋಪಿತರ ಹಾಗು ಫಿರ್ಯಾದುದಾರರ ನಡುವೆ ನಡೆದಿರುವ ವಿದ್ಯಮಾನಗಳನ್ನು ನೆರಳು ಸಾಕ್ಷಿ ಹಾಗೂ ಪ್ರತ್ಯಕ್ಷ ಸಾಕ್ಷಿದಾರರು ಗಮನಿಸಿದ್ದು, ಮಹಜರು ಸಮಯದಲ್ಲಿ ಹೇಳಿಕೆಯನ್ನು ನೀಡಿರುತ್ತಾರೆ. ಆರೋಪಿ ಶ್ರೀ ಮೆಹಬೂಬ್ ಖಾನ್ ಜಿಲ್ಲಾ ನೋಂದಣಾಧಿಕಾರಿ ಇವರನ್ನು ದಿನಾಂಕ 03–02–2010 ರಂದು ದಸ್ತಗಿರಿ ಮಾಡಿ ನ್ಯಾಯಾಧೀಶರ ಮುಂದೆ ಹಾಜರುಪಡಿಸಲಾಗಿದ್ದು, ನ್ಯಾಯಾಧೀಶರ ಆದೇಶದಂತೆ ಆರೋಪಿತರನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಗಿದೆಯೆಂದು;

ಮೇಲೆ ವಿವರಿಸಿರುವಂತೆ ಆರೋಪಿ ಶ್ರೀ ಮೆಹಬೂಬ್ ಖಾನ್ ರವರ ಮೇಲಿನ ಭ್ರಷ್ಟಾಚಾರದ ಆಪಾದನೆಗಳು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಆರೋಪಿತರು ತಮ್ಮ ಸ್ಥಾನದಲ್ಲಿಯೇ ಮುಂದುವರೆದರೆ ತನಿಖೆಯ ಹಾದಿಯನ್ನು ತಪ್ಪಿಸುವ ಮತ್ತು ಸಾಕ್ಷ್ಯಧಾರಗಳನ್ನು ನಾಶಪಡಿಸುವ ಅವಕಾಶಗಳಿರುವುದರಿಂದ, ಸದರಿಯವರನ್ನು ಸರ್ಕಾರಿ ಸೇವೆಯಿಂದ ತಕ್ಷಣವೇ ಅಮಾನತ್ತಿಸಲ್ಲಿಡಲು ಹಾಗು ಇವರ ಲೀನ್ (ಸ್ಥಾನ)ನ್ನು ಕೂಡ ಬೇರೆ ಕಡೆಗೆ ವರ್ಗಾಯಿಸಲು ಶಿಫಾರಸ್ಸು ಮಾಡಲಾಗಿದ್ದು, ಸದರಿ ಶಿಫಾರಸ್ಸಿನ ಬಗ್ಗೆ ಸರ್ಕಾರದಲ್ಲಿ ತೆಗೆದುಕೊಂಡ ಕ್ರಮದ ಬಗ್ಗೆ ಮಾಹಿತಿಯನ್ನು ಕಳುಹಿಸುವಂತೆ ಕೋರಿರುತ್ತಾರೆ.

ಸದರಿ ಪತ್ರದ ಜೊತೆಯಲ್ಲಿ ಫಿರ್ಯಾದುದಾರರ ದೂರು, ಪ್ರಥಮ ವರ್ತಮಾನ ವರದಿ ಪ್ರಾಯೋಗಿಕ ಪಂಚನಾಮೆ ಮತ್ತು ಟ್ರ್ಯಾಪ್ ಪಂಚನಾಮೆಯ ಪ್ರತಿಗಳನ್ನೂ ಕಳುಹಿಸಿರುತ್ತಾರೆ.

ಮೇಲಿ ಓದಲಾದ (2)ರ ದಿನಾಂಕ 04–02–2010 ಅಧಿಕೃತ ಜಾಪನದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗು ಮುದ್ರಾಂಕಗಳ ಆಯುಕ್ತರವರು ಶ್ರೀ ಮೆಹಬೂಬ್ ಖಾನ್, ಜಿಲ್ಲಾ ನೋಂದಣಾಧಿಕಾರಿ ಇವರನ್ನು ಲಂಚ ಸ್ವೀಕಾರದ

ಆರೋಪದ ಮೇಲೆ ಲೋಕಾಯುಕ್ತ ಅಧಿಕಾರಿಗಳು ದಿನಾಂಕ 03-02-2000 ರಂದು ಮಧ್ಯಾಹ್ನ 2.30 ಗಂಟೆಗೆ ದಸ್ತಗಿರಿ ಮಾಡಿರುವ ಹಿನ್ನಲೆಯಲ್ಲಿ ಜಿಲ್ಲಾ ನೋಂದಣಾಧಿಕಾರಿ, ರಾಜಾಜಿನಗರ ಇವರನ್ನು ಶಿವಾಜಿನಗರ ಜಿಲ್ಲಾ ನೋಂದಣಾಧಕಾರಿ ಹುದ್ದೆಯಲ್ಲಿ ಅಧಿಕ ಪ್ರಭಾರದಲ್ಲಿ ಇಟ್ಟಿದ್ದಾರೆ. ಅದರಂತೆ ರಾಜಾಜಿನಗರ ಜಿಲ್ಲಾ ನೋಂದಣಾಧಿಕರಿಗಳು ಶಿವಾಜಿನಗರ ಜಿಲ್ಲಾ ನೋಂದಣಾಧಿಕಾರಿ ಹುದ್ದೆಯ ಅಧಿಕ ಪ್ರಭಾರವನ್ನು ದಿನಾಂಕ 04-02-2010ರ ಅಪರಾಹ್ನ ವಹಿಸಿಕೊಂಡಿದ್ದಾರೆ. ತದನಂತರ ಶ್ರೀ ಮೆಹಬೂಬ್ ಖಾನ್ ಜಿಲ್ಲಾ ನೋಂದಣಾಧಿಕಾರಿ ಇವರು ದಿನಾಂಕ 09-02-2001 ರಂದು ರಾಜಾಜಿನಗರ ಜಿಲ್ಲಾ ನೋಂದಣಾಧಿಕಾರಿಯವರಿಗೆ ದೂರವಾಣಿ ಮೂಲಕ ಮಾತನಾಡುತ್ತಾ ಅವರು ಶಿವಾಜಿನಗರ ಜಿಲ್ಲಾ ನೋಂದಣಿ ಕಛೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗುತ್ತಿರುವುದಾಗಿ ತಿಳಿಸಿದ ಮೇರೆಗೆ ಮತ್ತು ಅಂದು ರಾಜಾಜಿನಗರ ಜಿಲ್ಲಾ ನೋಂದಣಾಧಿಕಾರಿಯವರು ನ್ಯಾಯಾಲಯ ಪ್ರಕರಣವೊಂದರಲ್ಲಿ ನ್ಯಾಯಾಲಯದಲ್ಲಿ ವಿಚಾರಣೆಗೆ ಹಾಜರಾಗಿದ್ದ ಕಾರಣ ಶಿವಾಜಿನಗರ ಜಿಲ್ಲಾ ನೋಂದಣಿ ಕಛೇರಿಯಲ್ಲಿ ಅಧಿಕ ಪ್ರಭಾರದಲ್ಲಿ ಮುಂದುವರಿದಿರುವುದಿಲ್ಲವೆಂದು ಜಿಲ್ಲಾ ನೋಂದಣಾಧಿಕಾರಿಯವರು ಇಲಾಖಾ ಮುಖ್ಯಸ್ಥರಿಗೆ ವರದಿ ಮಾಡಿರುತ್ತಾರೆ.

ಅಲ್ಲದೇ ಇಲಾಖಾ ಮುಖ್ಯಸ್ಥರು ದಿನಾಂಕ 06-02-2010ರ ಪತ್ರದಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರು ದಿನಾಂಕ 03-02-2010ರ ವರದಿಯಲ್ಲಿ ಫಿರ್ಯಾದುದಾರರಾದ ಶ್ರೀ ಅಸೀಮ್ ಜೈನ್ ಎಂಬುವವರು ನೀಡಿದ ದೂರಿನ ಮೇರೆಗೆ ಆರೋಪಿ ಶ್ರೀ ಮೆಹಬೂಬ್ ಖಾನ್, ಜಿಲ್ಲಾ ನೋಂದಣಾಧಿಕಾರಿ, ಶಿವಾಜಿನಗರ ರವರ ವಿರುದ್ಧ ಪ್ರಕರಣವು ದಾಖಲಾಗಿದ್ದು, ದಿನಾಂಕ 03-02-2010ರಂದು ಫಿರ್ಯಾದುದಾರರಿಂದ ರೂ. 18,000/- ಗಳ ಲಂಚದ ಹಣವನ್ನು ಪಡೆಯುವಾಗ ಲೋಕಾಯುಕ್ತ ಬಲೆಗೆ ಸಿಕ್ಕಿ ಬಿದ್ದಿದ್ದು, ಪ್ರಕರಣವು ತನಿಖೆಯಲ್ಲಿರುತ್ತದೆಂದು ಸದರಿ ಶ್ರೀ ಮೆಹಬೂಬ್ ಖಾನ್, ಜಿಲ್ಲಾ ನೋಂದಣಾಧಿಕಾರಿ, ಶಿವಾಜಿನಗರ ಇವರನ್ನು ಲಂಚ ಸ್ವೀಕಾರದ ಆರೋಪದ ಮೇಲೆ ದಿನಾಂಕ 03-02-2010ರಂದು ಮದ್ಯಾಹ್ನ 2.30 ಗಂಟೆಗೆ ದಸ್ತಗಿರಿ ಮಾಡಲಾಗಿರುತ್ತದೆಂದು ವರದಿ ಮಾಡಿರುವುದಾಗಿ ತಿಳಿಸಿರುತ್ತಾರೆ.

ಮೇಲಿನ ವಿವರಗಳ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಲಭ್ಯಪಡಿಸಿರುವ ವರದಿ/ದಾಖಲೆಗಳ ಪ್ರಕಾರ ಆರೋಪಿ ಶ್ರೀ ಮೆಹಬೂಬ್ ಖಾನ್, ಜಿಲ್ಲಾ ನೋಂದಣಾಧಿಕಾರಿ, ಶಿವಾಜಿನಗರ ಅವರ ಮೇಲಿನ ಭ್ರಷ್ಟಾಚಾರದ ಆಪಾದನೆಗಳು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 10(2)(ಎ) ಪ್ರಕಾರ ಸರ್ಕಾರಿ ನೌಕರರನ್ನು ಕ್ರಿಮಿನಲ್ ಆರೋಪದ ಮೇಲಾಗಲೀ ಅಥವಾ ಅನ್ಯಥಾ ಆಗಲೀ ನಲವತ್ತೆಂಟು ಗಂಟೆಗಳಿಗೆ ಮೀರಿದ ಅವಧಿಯವರೆಗೆ ಅಭಿರಕ್ಷೆಯಲ್ಲಿ ತಡೆಹಿಡಿದಿದ್ದರೆ, ಅವನನ್ನು ತಡೆಹಿಡಿದ ಆ ದಿನಾಂಕದಿಂದ ನೇಮಕಾತಿ ಪ್ರಾಧಿಕಾರದ ಮೂಲಕ ಅಮಾನತ್ತಿನಲ್ಲಿಡಲಾಗಿದೆ ಎಂದು ಭಾವಿಸತಕ್ಕದ್ದು ಎಂದು ಇರುವುದರಿಂದ ಶ್ರೀ ಮೆಹಬೂಬ್ ಖಾನ್, ಜಿಲ್ಲಾ ನೋಂದಣಾಧಿಕಾರಿ, ಶಿವಾಜಿನಗರ, ಇವರನ್ನು ದಿನಾಂಕ 03-02-2010ರಿಂದ ಅಮಾನತ್ತುಗೊಳಿಸಲು ತೀರ್ಮಾನಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 5 ಮುನೋಸೇ (1) 2010, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನೆಲೆಯಲ್ಲಿ ಶ್ರೀ ಮೆಹಬೂಬ್ ಖಾನ್, ಜಿಲ್ಲಾ ನೋಂದಣಾಧಿಕಾರಿ, ಶಿವಾಜಿನಗರ, ಬೆಂಗಳೂರು, ಇವರನ್ನು ಲಂಚ ಸ್ವೀಕಾರದ ಆರೋಪದ ಮೇಲೆ ಕರ್ನಾಟಕ ಲೋಕಾಯುಕ್ತ ಪೊಲೀಸ್ ವಿಭಾಗದವರು ಪ್ರಕರಣವನ್ನು ದಾಖಲು ಮಾಡಿಕೊಂಡು ಆರೋಪಿತರನ್ನು ದಿನಾಂಕ 03-02-2010ರಂದು ದಸ್ತಗಿರಿ ಮಾಡಿ ನ್ಯಾಯಾಂಗ ಬಂಧನದಲ್ಲಿರಿಸಿದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 10(2)(ಎ) ಪ್ರಕಾರ ಶ್ರೀ ಮೆಹಬೂಬ್ ಖಾನ್, ಜಿಲ್ಲಾ ನೋಂದಣಾಧಿಕಾರಿ, ಶಿವಾಜಿನಗರ, ಬೆಂಗಳೂರು ಇವರನ್ನು ದಿನಾಂಕ 03-02-2010ರಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಡಲಾಗಿದೆ.

ಸದರಿ ಅಧಿಕಾರಿಯವರು ಅಮಾನತ್ತಿನ ಅವಧಿಯಲ್ಲಿ ಸರ್ಕಾರದ ಪೂರ್ವಾನುಮತಿ ಪಡೆಯದೇ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಅಮಾನತ್ತಿನ ಅವಧಿಯಲ್ಲಿ ಸದರಿಯವರು ನಿಯಮಾನುಸಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.800

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ಒಳಾಡಳಿತ ಸಚಿವಾಲಯ**

**ವಿಷಯ :** 12ನೇ ಆರ್ಥಿಕ ಹಣಕಾಸು ಆಯೋಗದ ಯೋಜನೆಯಡಿಯಲ್ಲಿ ಅನುದಾನ ಬಿಡುಗಡೆ ಕುರಿತು.

**ಓದಲಾಗಿದೆ :** ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆರ್ಥಿಕ ಆಯೋಗ ಕೋಶ) ರವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಅಇ 09 ಆಆಕೋ 2010 ದಿನಾಂಕ: 11-03-2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 11-03-2010ರ ಅನಧಿಕೃತ ಟಿಪ್ಪಣಿಯಲ್ಲಿ, ಪೊಲೀಸ್ ಆಡಳಿತ ಸುಧಾರಣೆಯನ್ನು 12ನೇ ಹಣಕಾಸು ಆಯೋಗದಡಿ ಕೈಗೊಳ್ಳಲು ರೂ. 5.00 ಕೋಟಿ ಅನುದಾನ ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯು ಸಹಮತಿ ನೀಡಿದೆಯೆಂದು ತಿಳಿಸುತ್ತಾ, 12ನೇ ಆರ್ಥಿಕ ಹಣಕಾಸು ಆಯೋಗದಡಿ ಪೊಲೀಸ್ ಆಡಳಿತ ಸುಧಾರಣೆಗಾಗಿ ಪ್ರಸಕ್ತ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2055-00-800-0-11 (ಯೋಜನೇತರ ರಡಿಯಲ್ಲಿ ರೂ. 2500.00 ಲಕ್ಷಗಳನ್ನು ಒದಗಿಸಲಾಗಿದೆ. ಅಲ್ಲದೇ ಸದರಿ ಲೆಕ್ಕ ಶೀರ್ಷಿಕೆಯ ಪೂರಕ ಯೋಜನೆ-1, 2009-10 ರ ಅಡಿಯಲ್ಲಿ ರೂ. 2353.98 ಲಕ್ಷಗಳ ಅನುದಾನವನ್ನು ಕಲ್ಪಿಸಲಾಗಿದೆ. ಈಗ ಬಿಡುಗಡೆ ಮಾಡಿದ ಅನುದಾನವನ್ನು ಮೇಲೆ ಕಲ್ಪಿಸಲಾದ ಅನುದಾನದಲ್ಲಿ ಭರಿಸತಕ್ಕದ್ದು. ದಿನಾಂಕ 08-03-2010 ರಂದು ನಡೆದ ರಾಜ್ಯ ಮಟ್ಟದ ಉನ್ನತಾಧಿಕಾರಿಗಳ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ ದಿನಾಂಕ 20-03-2010 ರೊಳಗೆ ರೂ. 15.00 ಕೋಟಿ ಅನುದಾನಗಳ ಬಳಕೆಯ ಪ್ರಮಾಣ ಪತ್ರವನ್ನು ಒದಗಿಸುವುದು ಮತ್ತು ಸದರಿ ಆಯೋಗದಡಿ ಬಿಡುಗಡೆ ಮಾಡಿರುವ ಅನುದಾನವನ್ನು ದಿನಾಂಕ 25-03-2010 ರೊಳಗೆ ಬಳಸಿಕೊಳ್ಳಲು ಮತ್ತು ಬಳಸಿಕೊಳ್ಳದೆ ಬಾಕಿ ಉಳಿದಿರುವ ಅನುದಾನವನ್ನು ದಿನಾಂಕ 30-03-2010 ರೊಳಗೆ ಸರ್ಕಾರಕ್ಕೆ ಆದ್ಯರ್ಪಣೆ ಮಾಡುವಂತೆ ತಿಳಿಸಲಾಗಿದೆ.

ಈ ಬಗ್ಗೆ ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 04 ಪಿಎಫ್ಎಸ್ 2010, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 12ನೇ ಆರ್ಥಿಕ ಹಣಕಾಸು ಆಯೋಗದಡಿ ಪೊಲೀಸ್ ಆಡಳಿತ ಸುಧಾರಣೆಗಾಗಿ ಇದುವರೆವಿಗೂ ಬಿಡುಗಡೆ ಮಾಡಿ ಬಾಕಿ ಉಳಿದಿರುವ ಅನುದಾನ ರೂ. 5.00 ಕೋಟಿಗಳನ್ನು (ಐದು ಕೋಟಿ ರೂಪಾಯಿಗಳು ಮಾತ್ರ) ದಿನಾಂಕ 25-03-2010 ರೊಳಗೆ ಉಪಯೋಗಿಸಿಕೊಳ್ಳುವ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ.

ಈ ಮೊತ್ತವನ್ನು 2009-10ನೇ ಸಾಲಿನ ಲೆಕ್ಕ ಶೀರ್ಷಿಕೆ 2055-00-800-0-11 ಯೋಜನೇತರ (non-plan) ಇದರಡಿಯಲ್ಲಿ ಲಭ್ಯವಿರುವ ಅನುದಾನದಿಂದ ಭರಿಸತಕ್ಕದ್ದು.

12ನೇ ಆರ್ಥಿಕ ಹಣಕಾಸು ಆಯೋಗದ ಯೋಜನೆಯಡಿ ಇದುವರೆಗೂ ಬಿಡುಗಡೆ ಮಾಡಿ ಬಳಸಿಕೊಳ್ಳದೆ ಬಾಕಿ ಇರುವ ಅನುದಾನವನ್ನು ದಿನಾಂಕ 30-03-2010ರೊಳಗೆ ಸರ್ಕಾರಕ್ಕೆ ಆದ್ಯರ್ಪಣೆ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 09 ಎಫ್‌ಸಿಸಿ 2010, ದಿನಾಂಕ 11-03-2010ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಂ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

ಪಿ.ಆರ್.801

**COMMERCE AND INDUSTRIES SECRETARIAT**

**Sub :** Approval to the Project Proposal of M/s. ACC Ltd., to setup 1 MTPA Fly Ash Based Portland Posolona Cement Grinding Unit, at yellur Village, Nandikuru P.O. Padubidri, Udupi District.

**Read :** Proceedings of the 20th State High Level Clearance Committee (SHLCC) meeting held on 05.01.2010.

**Preamble:**

M/s. ACC Ltd., proposes to establish 1 MTPA Fly Ash Based Portland Posolona Cement Grinding Unit, at Yellur Village, Nandikuru P.O. Padubidri, Udupi District. With an investment of Rs. 280 crores, generating employment to about 205 persons.

In the 20th State High Level Clearance Committee (SHLCC) meeting held on 05.01.2010 the proposal of Company has been approved.

Government has examined the recommendations made by the State High Level Clearance Committee in the 20th Meeting held on 05.01.2010, in all aspects.

Hence the following Order.

**Government Order No. CI 38 SPI 2010, Bangalore, dated : 03-04-2010**

Government is pleased to accord in principle approval for the project proposal of M/s. ACC Ltd., to establish 1 MTPA Fly Ash Based Portland Posolona Cement Grinding Unit, at Yellur Village, Nandikuru P.O. Padubidri, Udupi District, with an investment of Rs. 280 crores, generating employment to about 205 persons and extend the following infrastructure facilities, incentives and concessions.

**INFRASTRUCTURE FACILITIES :**

1. **Land :** 120.54 acres – KIADB to acquire and allot as SUC with consent of land owners.
2. **Power :** 6300 KVA power to be serviced from MESCOM.
3. **Water :** 6.40 MLD from own source.
4. **Incentives and Concessions :** As applicable under New Industrial Policy 2009-14.

**GENERAL TERMS AND CONDITIONS:**

1. **MOU:** The project proponents will have to sign a MOU with the Government of Karnataka during the Global Investors Meet in June 2010.
2. **Environment:** The promoters to obtain CFE and CFO from KSPCB and environmental clearance from MOEF, GOI.
3. **Employment:** The Company shall prepare a plan for development of Human Resources required for the project, train local people and provide employment to these trained local youth and comply with Government policy of Employment to local people i.e. Dr. Sarojini Mahishi report. A copy of Human Resources Development plan shall be sent to the Commissioner for I.D. & Director of Industries and Commerce for monitoring.
4. **Vendor Development:** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development:** The Company is advised to take up social infrastructure of development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Others:**
   a) The project proponents shall provide employment to at least one member of the family of each land looser as the land is being acquired through KIADB.
   b) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.

c) The promoters shall take all statutory and other necessary clearanceds from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka

**Aparna Pavate**

PR NO. 916

Desk Officer (Technical Cell)

Commerce and Industries Department

**ENERGY SECRETARIAT**

**Sub :** Purchase of power from Bio-Mass Projects Units for the short term from April 2010 to June 2010.

**Read :** 1) Go No. EN 65 EEB 2008 dated 27.01.2009.

2) Cabinet decision dated 29.03.2010.

**Preamble:**

1. Karnataka State has been reeling under acute power shortage for some time. The State has faced severe power shortage in the year 2008-2009 as there was huge gap between demand – supply in the State. To protect the interest of consumers. Government decided to purchase power from various sources available including from Bio-Mass Projects Units in 2008-09 after negotiations held with Bio-Mass Projects firms for working out a cost, and the realistic rate at Rs. 5.02 per unit was arrived. Accordingly, in Government Order read at (1) above, it was decided to purchase power round the clock from Bio-Mass Projects units at Rs. 5.00 (Rs. Five only) per Kwh from 1st January 2009 to 31st May 2009. Payment of this rate to Bio-Mass Projects Units, which were supplying power under Power Purchase Agreement was subject to approval by Karnataka Electricity Regulatory Commission. Further, the rate at 5.00 per kwh was temporary and was subject to approval of KERC and all State ESCOMs to submit a Memorandum on the circumstances warranting higher price and need of the State to procure more power before KERC.

2. The State has faced a severe power deficit situation even in 2009-10 and the adverse energy deficit is likely to continue till June 2010. In order to overcome the severe demand supply gap for the coming summer months, action has been initiated to purchase power from independent Power Producers (IPPs). Co-generation Sugar Factories, Bio-Mass and other sources, keeping in view the public interest.

3. The proposal to purchase power for the short term in view of the critical power shortage in the State and the need to augment short term capacity from Co-generation Sugar Factories was placed before the State Cabinet on 29.03.2010. In the said Cabinet Meeting purchasing power from Bio-Mass Projects Units has also been discussed, keeping in view the severe power shortage in summer months of 2010.

4. Based on the above, Government has reviewed to purchase power from Bio-Mass Projects Units for the summer months for April & May 2010 to tide over the power crisis at the the rate of Rs.5/- per Kwh as fixed last year, subject to approval of KERC including the cost calculation details as under:

| Considering Bio-Mass per MT in Rs. | Cost per Kilo watt hour In Rs. |
|---|---|
| 1280 | 3.66 |
| 1500 | 3.95 |
| 1800 | 4.34 |
| 2000 | 4.60 |
| 2200 | 4.86 |
| 2400 | 4.99 |

Accordingly this order.

**Government Order No. EN 29 EEB 2010, Bangalore, dated 6th April 2010**

1. Under the circumstances explained above, Government are pleased to accord approval to purchase power as short-term arrangement for the period from April and May 2010 from Bio-mass projects units at Rs. 5.00 (Rs. Five only) per Kwh.

2. Payment of this rate to Bio-mass project units, which are supplying the above power under Power Purchase Agreement, is subject to approval by the Karnataka Electricity Regulatory Commission, with reference to the applications to be filed by Electricity Supply Companies (ESCOMs), in this behalf.

3. For Bio-Mass Projects Units without Power Purchase Agreement, the above rate is provisional and is subject to approval of Karnataka Electricity Regulatory Commission (KERC).

4. All State Electricity Supply Companies (ESCOMs) shall submit a Memorandum on the circumstances and need of the State to procure power from Bio-Mass Projects Units before the Karnataka Electricity Regulatory Commission (KERC) immediately.

5. This order shall come into immediate effect and the above rates will be in force **till 31st May 2010 or until further orders whichever is earlier.**

By Order and in the name of the Governor of Karnataka

**S.J. Sampath Kumar**

PR NO. 917

Under Secretary to Government,
Energy Department

**FOREST, ECOLOGY AND ENVIRONMENT SECRETARIAT**

**CORRIGENDUM**

**Government Order No. FEE 141 FLL 2008, Bangalore, dated : 25-03-2010**

In Government Order No. FEE 141 FLL 2008, dated 31.08.2009, condition No. 20 shall be read as “the user agency has to pay 50% of the net Present Value of the forest land diverted under this proposal as per the orders of Hon’ble Supreme Court of India dated 28.03.2008 and 09.05.2008”.

By Order and in the name of the Governor of Karnataka

**H.M. MALLIKARJUNA SWAMY**

P.R. 918

Under Secretary to Government,
Forest, Ecology and Environment Department.

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ :** ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತಕ್ಕೆ ನೀಡುವ ಬೊಂಬುಗಳಿಗೆ ಸೀನಿಯರೇಜ್ ದರ ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :**
1. ವ್ಯವಸ್ಥಾಪಕ ನಿರ್ದೇಶಕರು, ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ, ಬೆಂಗಳೂರು ಇವರ ಪತ್ರ ಸಂಖ್ಯೆ: ಟಿಇಸಿ–4 ಹೂಬಿಟ್ಟ ಬಂಬೂ/ಸಿಆರ್–48/09–10, ದಿನಾಂಕ 25.07.2009.
2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರ ಸಂಖ್ಯೆ ಎ7/ಬಿಎಂಬಿ/ಟಿಎನ್‌ಡಿ/ಸಿಆರ್–1/09–10, ದಿನಾಂಕ 20.11.2009.

**ಪ್ರಸ್ತಾವನೆ :**

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಅರಣ್ಯ ಇಲಾಖೆಯ ವಿವಿಧ ವಿಭಾಗಗಳಲ್ಲಿ ಒಣಗಿದ ಹಾಗೂ ಹೂಬಿಟ್ಟ ಬೊಂಬುಗಳ ವಿಲೇವಾರಿಗೆ ಕರೆದ ಟೆಂಡರ್‌ನಲ್ಲಿ ದರಗಳು ಅತೀ ಕಡಿಮೆ ಇದ್ದ ಪ್ರಯುಕ್ತ ಬಿಡ್‌ದಾರರೊಂದಿಗೆ

ಸಂಧಾನ ಮಾಡಿಕೊಂಡು ರಾಯಲ್ಟಿ ಹಣ ಮತ್ತು ತೆರಿಗೆಗಳು ಸೇರಿ ಪ್ರತಿ ಮೆಟ್ರಿಕ್ ಟನ್‌ಗೆ ರೂ. 325-00 ನ್ನು ನಿಗದಿ ಮಾಡಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ, ಬೆಂಗಳೂರು ಇವರು ಸದರಿಯವರ ನಿಗಮಕ್ಕೆ ಪ್ರತಿ ಮೆಟ್ರಿಕ್ ಟನ್‌ಗೆ ರೂ. 325-00 ದರ ನಿಗದಿಪಡಿಸಿದಲ್ಲಿ, ನಿಗಮವು ಲಾಭದಾಯಕವಾದ ವಹಿವಾಟನ್ನು ನಿರ್ವಹಿಸಲು ಸಾಧ್ಯವಾಗದ ಕಾರಣ ಮತ್ತು ನಿಗಮದ ಹಿತದೃಷ್ಟಿಯಿಂದ ಪ್ರತಿ ಮೆಟ್ರಿಕ್ ಟನ್‌ಗೆ ರೂ. 280-00 ಗಳನ್ನು ನಿಗದಿಪಡಿಸಲು ಕ್ರಮಾಂಕ (1) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಮೇಲೆ ಕ್ರಮ ಸಂಖ್ಯೆಯ (2) ರಲ್ಲಿ ಓದಲಾದ ಪತ್ರದಲ್ಲಿ ಖರೀದಿದಾರರಿಗೆ ಟೆಂಡರ್ ದರದಲ್ಲಿ ಒದಗಿಸಿ, ಉಳಿದಿರುವ ಸುಮಾರು 75,000 ಸಾವಿರ ಮೆಟ್ರಿಕ್ ಟನ್ ಒಣಗಿದ ಮತ್ತು ಹೂಬಿಟ್ಟ ಬೊಂಬುಗಳನ್ನು ಲಭ್ಯವಿದ್ದು ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಮತ್ತು ಅರಣ್ಯಕ್ಕೆ ಬೆಂಕಿ ಬೀಳುವುದನ್ನು ತಡೆಗಟ್ಟಲು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ ಇವರಿಗೆ ಪ್ರತಿ ಮೆಟ್ರಿಕ್ ಟನ್‌ಗೆ ರೂ. 325-00 ಮತ್ತು ತೆರಿಗೆಗಳು ದರದ ಮೇರೆಗೆ ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಅಪಜೀ 118 ಎಫ್‌ಡಿಪಿ 2009, ಬೆಂಗಳೂರು, ದಿನಾಂಕ 29ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಕರ್ನಾಟಕ ಅರಣ್ಯ ಕೈಗಾರಿಕಾ ನಿಗಮ ನಿಯಮಿತ, ಬೆಂಗಳೂರು ಇವರಿಗೆ ಲಭ್ಯತೆಯ ಆಧಾರದ ಮೇಲೆ ರೂ. 75,000 ಮೆಟ್ರಿಕ್ ಟನ್ (ಎಪ್ಪತ್ತೈದು ಸಾವಿರ ಮೆಟ್ರಿಕ್ ಟನ್) ಒಣಗಿದ ಹಾಗೂ ಹೂಬಿಟ್ಟ ಬೊಂಬುಗಳನ್ನು ಪ್ರತಿ ಮೆಟ್ರಿಕ್ ಟನ್‌ಗೆ ರೂ. 325-00 ಮತ್ತು ತೆರಿಗೆಗಳು ಸೀನಿಯರೇಜ್ ದರದಲ್ಲಿ ಒದಗಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 919

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ ಅಪಜೀ 118 ಎಫ್‌ಡಿಪಿ 2009, ಬೆಂಗಳೂರು, ದಿನಾಂಕ 31ನೇ ಮಾರ್ಚ್ 2010**

ಸರ್ಕಾರಿ ಆದೇಶ ಸಂಖ್ಯೆ ಅಪಜೀ 118 ಎಫ್‌ಡಿಪಿ 2009, ದಿನಾಂಕ 29-03-2010 ರ ಆದೇಶ ಭಾಗದ 2ನೇ ಪಂಕ್ತಿಯಲ್ಲಿ "ರೂ. 75,000 ಮೆಟ್ರಿಕ್ ಟನ್" ಎಂಬುದರ ಬದಲಾಗಿ "75,000 ಮೆಟ್ರಿಕ್ ಟನ್" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 920

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರದ ಕಾರ್ಯ ಚಟುವಟಿಕೆಗಳನ್ನು ಪ್ರಾರಂಭಿಸಲು ಅನುವಾಗುವಂತೆ ರೂ. 1.00 ಕೋಟಿ ರೂ.ಗಳ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಆದೇಶ ಸಂಖ್ಯೆ ನಅಇ 355 ಬೆಮಪ್ರಾ 2008(ಪಿ) ದಿನಾಂಕ 22.10.2009 ಮತ್ತು 25.01.2010.
2. ಸರ್ಕಾರಿ ಆದೇಶ ಸಂಖ್ಯೆ:ನಅಇ 06 ಪಿಎನ್‌ಜಿ 2009, ದಿನಾಂಕ 20.04.2009.
3. ಆಯುಕ್ತರು, ವಿಜಯನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ತೋರಣಗಲ್ಲು, ಸಂಡೂರು ರವರ ಪತ್ರ ಸಂಖ್ಯೆ:ವಾಡಾ:ಸಿಬ್ಬಂದಿ:ಅನುದಾನ: 32:2009-10, ದಿನಾಂಕ 13.01.2010.

**ಪ್ರಸ್ತಾವನೆ :**

ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ನಗರಾಭಿವೃದ್ಧಿ ಇಲಾಖೆಯ ರಾಜ್ಯ ವಲಯದ ಹಾಗೂ ಕೇಂದ್ರ ಪುರಸ್ಕೃತ ಯೋಜನೆಗಳಿಗೆ ಸಂಬಂಧಿಸಿದಂತೆ 2009-10ನೇ ಸಾಲಿಗೆ ಮುಂದುವರೆದ ಯೋಜನಾ ಕಾರ್ಯಕ್ರಮಗಳಡಿಯಲ್ಲಿ

ನಗರ ಭೂ ಸಾರಿಗೆ ರಾಜ್ಯ ನಿರ್ದೇಶನಾಲಯಕ್ಕಾಗಿ (DULT) ಲೆಕ್ಕ ಶೀರ್ಷಿಕೆ 2217–80–800–0–23–059 ರಡಿಯಲ್ಲಿ ಅನುವು ಮಾಡಿರುವ ಮೊತ್ತದಲ್ಲಿ ಉಳಿತಾಯ ಆಗುವ ಹಣದಲ್ಲಿ ರೂ. 1.00 ಕೋಟಿಗಳನ್ನು (ರೂ. ಒಂದು ಕೋಟಿ ಮಾತ್ರ) ಮೇಲಿನ ಲೆಕ್ಕಶೀರ್ಷಿಕೆಯಿಂದ ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಪ್ರಾಥಮಿಕವಾಗಿ ಅನುವು ಮಾಡಿರುವ ಹೊಸ ಲೆಕ್ಕಶೀರ್ಷಿಕೆ 2217–80–800–0–25ಕ್ಕೆ ಮರು ಹೊಂದಾಣಿಕೆ ಮಾಡಿ ಮೇಲೆ ಓದಲಾದ ಉಲ್ಲೇಖ (1) ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು.

ಆಯುಕ್ತರು, ವಿಜಯನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ತೋರಣಗಲ್ಲು, ಸಂಡೂರು ರವರು ಮೇಲೆ ಓದಲಾದ ಕ್ರಮಾಂಕ (3) ರ ಪತ್ರದಲ್ಲಿ ಈ ಮೊತ್ತವನ್ನು ಪಡೆಯಲು ಮಹಾಲೇಖಪಾಲರ ಕಛೇರಿಯಿಂದ ಅನುಮತಿ ದೊರೆತಿದ್ದು, ಪ್ರಾಧಿಕಾರದಿಂದ ಖಜಾನೆಯಲ್ಲಿ ವ್ಯವಹರಿಸಲು ಡ್ರಾ ಕೋಡ್ ಸಂಖ್ಯೆ:3400TP 002 ರಲ್ಲಿ ದಿನಾಂಕ 01.01.2010ರಲ್ಲಿ ನೀಡಿದ್ದು, ಖಜಾನೆಯಲ್ಲಿ ಪ್ರಾಧಿಕಾರದ ಲೆಕ್ಕ ಶೀರ್ಷಿಕೆಗೆ ಅನುದಾನವು ಹೊಂದಾಣಿಕೆಯಾಗಿರುವುದಿಲ್ಲವೆಂದು ತಿಳಿಸಿ, ಪ್ರಸ್ತುತ ಪ್ರಾಧಿಕಾರದ ಸಿಬ್ಬಂದಿ/ಅಧಿಕಾರಿಗಳ ವೇತನ ಮತ್ತು ಕಾರ್ಯಚಟುವಟಿಕೆಗಳಿಗಾಗಿ ಸದರಿ ರೂ. 1.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಬೇಕೆಂದು ಕೋರಿದ ಹಿನ್ನೆಲೆಯಲ್ಲಿ ದಿನಾಂಕ 25.01.2010ರ ಆದೇಶದಲ್ಲಿ ಸದರಿ ಮೊತ್ತವನ್ನು ಬಿಡುಗಡೆ ಮಾಡಿ ಪೇಯಿಸ್ ರಸೀತಿಯಲ್ಲಿ ಖಜಾನೆಗೆ ರೂ. 1.00 ಕೋಟಿ ಬಿಡುಗಡೆ ಮಾಡಲು (DULT) ಲೆಕ್ಕ ಶೀರ್ಷಿಕೆ 2217–80–800–0–23–059 ರಡಿಯಲ್ಲಿ ಕೋರಲಾಗಿ, ಪ್ರಸ್ತುತ ಸದರಿ ಲೆಕ್ಕಶೀರ್ಷಿಕೆಯಡಿಯಲ್ಲಿ ರೂ. 23,98,131/–, ಮಾತ್ರ ಉಳಿದಿದೆ ಎಂದು ತಿಳಿಸಿದ ಪ್ರಯುಕ್ತ ಸರ್ಕಾರವು ಪ್ರಸ್ತಾವನೆಯನ್ನು ಪುನಃ ಪರಿಶೀಲಿಸಿ, ಪ್ರಾಧಿಕಾರದ ಸಿಬ್ಬಂದಿ/ಅಧಿಕಾರಿಗಳ ವೇತನ ಮತ್ತು ಕಾರ್ಯಚಟುವಟಿಕೆಗಳಿಗಾಗಿ ತುರ್ತಾಗಿ ಲಭ್ಯವಿರುವ ರೂ. 23,98,131/– ಮೊತ್ತವನ್ನು 2217–80–800–0–23–059 ಲೆಕ್ಕ ಶೀರ್ಷಿಕೆಯಡಿ ನಗರ ಭೂ ಸಾರಿಗೆ ರಾಜ್ಯ ನಿರ್ದೇಶನಾಲಯಕ್ಕಾಗಿ (DULT) ಬಿಡುಗಡೆ ಮಾಡಲು ಉದ್ದೇಶಿಸಿದ ಮೊತ್ತದಲ್ಲಿ ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 355 ಬೆಮಪ್ರಾ 2008 (ಪಿ), ಬೆಂಗಳೂರು, ದಿನಾಂಕ 29ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರದ ಕಾರ್ಯಚಟುವಟಿಕೆಗಳಿಗಾಗಿ ತುರ್ತಾಗಿ ಅಗತ್ಯವಿರುವ ರೂ. 23,98,131/– (ರೂ. ಇಪ್ಪತ್ತಮೂರು ಲಕ್ಷಗಳು ತೊಂಬತ್ತೆಂಟು ಸಾವಿರದ ಒಂದು ನೂರ ಮುವತ್ತೊಂದು ಮಾತ್ರ) ಮೊತ್ತವನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಡಿ ನಗರ ಭೂ ಸಾರಿಗೆ ರಾಜ್ಯ ನಿರ್ದೇಶನಾಲಯಕ್ಕಾಗಿ (DULT) ಬಿಡುಗಡೆ ಮಾಡಲು ಉದ್ದೇಶಿಸಿದ ಮೊತ್ತದಲ್ಲಿ ಆಯುಕ್ತರು ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರ ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ. (ಲಕ್ಷ ರೂ.ಗಳಲ್ಲಿ)

| ಕ್ರ. ಸಂ. | ಯೋಜನೆಯ ಹೆಸರು | ಲೆಕ್ಕ ಶೀರ್ಷಿಕೆ | 2009–10ರ ಆಯವ್ಯಯದಲ್ಲಿ ಒದಗಿಸಿರುವ ಮೊತ್ತ | ಪ್ರಸ್ತುತ ಬಿಡುಗಡೆ ಮಾಡಿರುವ ಮೊತ್ತ |
|---|---|---|---|---|
| 1 | ನಗರ ಭೂ ಸಾರಿಗೆ ರಾಜ್ಯ ನಿರ್ದೇಶನಾಲಯಕ್ಕಾಗಿ (DULT) | 2217–80–800–0–23–059 | 500.02 | ರೂ. 23,98,131/– |
| | | ಒಟ್ಟು ರೂ. | 500.02 | ರೂ.23,98,131/– |

1) ಈ ಯೋಜನೆಯ ಲೆಕ್ಕ ಶೀರ್ಷಿಕೆಯಡಿ ಬಿಡುಗಡೆ ಮಾಡಲಾದ ಮೊತ್ತವನ್ನು ಬಿಡುಗಡೆ ಮಾಡಿದ ಉದ್ದೇಶಕ್ಕೆ ಮಾತ್ರ ವೆಚ್ಚ ಮಾಡತಕ್ಕದ್ದು ಹಾಗೂ ಯಾವುದೇ ಕಾರಣಕ್ಕೂ ಸದರಿ ಮೊತ್ತವನ್ನು ಬೇರೆ ಯೋಜನೆಗಳಿಗೆ ಬಳಸಬಾರದು.

2) ಈ ಆದೇಶದಲ್ಲಿ ಬಿಡುಗಡೆ ಮಾಡಿದ ಮೊತ್ತವನ್ನು ಮೇಲೆ ತಿಳಿಸಿರುವ ಲೆಕ್ಕ ಶೀರ್ಷಿಕೆಯಲ್ಲಿ ಡ್ರಾ ಮಾಡಲು ಆಯುಕ್ತರು, ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರ, ವಿಜಯನಗರ ಇವರು ಪೇಯಿಂಗ್ ರಸೀದಿಯಲ್ಲಿ ಸರ್ಕಾರದ ಉಪ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ಇವರ ಮೇಲು ರುಜುವನ್ನು ಪಡೆದು ಡ್ರಾ ಮಾಡತಕ್ಕದ್ದು.

3) ಈ ಆದೇಶದಲ್ಲಿ ಡ್ರಾ ಮಾಡಿದ ಮೊತ್ತವನ್ನು ವಿಜಯನಗರ ಪ್ರಾಧಿಕಾರದ ಕಾರ್ಯ ಚಟುವಟಿಕೆಗಳನ್ನು ಪ್ರಾರಂಭಿಸಲು ಅನುವಾಗುವಂತೆ ಉಪಯೋಗಿಸತಕ್ಕದ್ದು, ಮತ್ತು ಲೆಕ್ಕ ಪತ್ರಗಳನ್ನು ಪ್ರತ್ಯೇಕವಾಗಿ ನಿರ್ವಹಿಸತಕ್ಕದ್ದು.

4) ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಹಣಕ್ಕೆ ಬಳಕೆ ಪ್ರಮಾಣ ಪತ್ರ (Utilization Certificate) ನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

5) ಮೇಲೆ ಕ್ರಮಾಂಕ (2) ಆದೇಶದಲ್ಲಿ ವಿಧಿಸಿರುವ ಷರತ್ತುಗಳಿಗೊಳಪಟ್ಟು ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಮೊತ್ತವನ್ನು ಬಳಸಿಕೊಳ್ಳತಕ್ಕದ್ದು ಮತ್ತು ಸದರಿ ಆದೇಶದಲ್ಲಿ ಸೂಚಿಸಿರುವಂತೆ ಕ್ರಮ ವಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 209 Exp-9/2010. ದಿನಾಂಕ 20.03.2010 ರನ್ವಯ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 921

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ,

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಹೊನ್ನಾವರ ವಿಭಾಗದಲ್ಲಿ 1983–84 ನೇ ಸಾಲಿನಲ್ಲಿ ಗೇರು ಫಸಲಿನ ಹರಾಜಿನಲ್ಲಿ ಶ್ರೀ ಉಮರ್ಜಿ ಅಬ್ದುಲ್ ರಹೀಂ ಶಂಸುದ್ದೀನ್ ಗಂಗೋಳ್ಳಿ ಇವರಿಂದ ಸರ್ಕಾರಕ್ಕೆ ಬರಬೇಕಾದ ರೂ. 40,351–15/– ಗಳನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ :** ಅಪರ ಪ್ರಧಾನ ಅರಣ್ಯ ಸಂರಕ್ಷಣಾಧಿಕಾರಿ ಇವರ ಪತ್ರ ಸಂಖ್ಯೆ: ಬಿ9/ಡಿಸಿಬಿ/ಮಾಫಿ/ಸಿಆರ್–13/93–94, ದಿನಾಂಕ 23/09/2008 ಮತ್ತು 27/08/2009.

**ಪ್ರಸ್ತಾವನೆ :**

ಹೊನ್ನಾವರ ವಿಭಾಗದಲ್ಲಿ 1983–84ನೇ ಸಾಲಿನ ಗೇರು ಫಸಲಿನ ಹರಾಜಿನಲ್ಲಿ ಶ್ರೀ ಉಮರ್ಜಿ ಅಬ್ದುಲ್ ರಹೀಂ ಶಂಸುದ್ದೀನ್ ಗಂಗೋಳ್ಳಿ ಇವರು ಭಾಗವಹಿಸಿದ ಟೆಂಡರ್‌ನಲ್ಲಿ ರೂ. 50,000/– ಗಳ ಮೊತ್ತಕ್ಕೆ ಖರೀದಿಸಿದ್ದು ತೆರಿಗೆ ಸೇರಿ ರೂ. 51,750/– ಹಣ ಪಾವತಿಸಬೇಕಾಗಿತ್ತು. ನಿಗದಿತ ಅವಧಿಯಲ್ಲಿ ಹಣ ಪಾವತಿಸದ ಕಾರಣ ಸದರಿ ಫಸಲನ್ನು ಮರು ಟೆಂಡರ್‌ನ ಮೂಲಕ ಹರಾಜು ಮಾಡಲಾಗಿ ರೂ. 11,398–85/– ದೊರೆತಿದ್ದು, ಶ್ರೀ ಉಮರ್ಜಿ ಅಬ್ದುಲ್ ರಹೀಂ ಶಂಸುದ್ದೀನ್ ರವರಿಂದ ಸರ್ಕಾರಕ್ಕೆ ಆದ ನಷ್ಟ ರೂ. 40,351–15/– ಬಾಕಿ ಇರುತ್ತದೆ. ಆದರೆ ಸದರಿಯವರು ಮೃತರಾಗಿದ್ದು ಅವರ ಹೆಸರಿನಲ್ಲಿ ಯಾವುದೇ ಸ್ಥಿರಾಸ್ತಿ ಇಲ್ಲದಿರುವುದರಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ರೂ. 40,351–15/– ಗಳನ್ನು ವಸೂಲು ಮಾಡಲು ಸಾಧ್ಯವಾಗದ ಕಾರಣ ಸದರಿ ಮೊತ್ತವನ್ನು ಮನ್ನಾ ಮಾಡುವಂತೆ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 168 ಎಫ್‌ಡಿಪಿ 2009, ದಿನಾಂಕ 25ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಶ್ರೀ ಉಮರ್ಜಿ ಅಬ್ದುಲ್ ರಹೀಂ ಶಂಸುದ್ದೀನ್ ಗಂಗೋಳ್ಳಿ ಇವರು ಹೊನ್ನಾವರ ವಿಭಾಗದಲ್ಲಿ 1983–84ನೇ ಸಾಲಿನಲ್ಲಿ ಗೇರು ಫಸಲಿನ ಹರಾಜಿಗೆ ಸಂಬಂಧಿಸಿದಂತೆ ಸರ್ಕಾರಕ್ಕೆ ಬರಬೇಕಾದ ಬಾಕಿ ರೂ. 40,351–15/– ನ್ನು (ರೂ. ನಲವತ್ತು ಸಾವಿರದ ಮುನ್ನೂರ ಐವತ್ತೊಂದು ರೂಪಾಯಿ ಮತ್ತು ಪೈಸೆ ಹದಿನೈದು) ವಸೂಲು ಮಾಡಲು ಸಾಧ್ಯವಾಗದ ಕಾರಣ ಮನ್ನಾ ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆದೇಶ ಸಂಖ್ಯೆ: 1 ಟಿಎಫ್‌ಪಿ 96, ದಿನಾಂಕ 10–07–1996 ಪ್ರಕಾರ ಇಲಾಖಾ ಕಾರ್ಯದರ್ಶಿಗಳಿಗೆ ನೀಡಿದ ಅಧಿಕಾರ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 922

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ :** ಸಾವರಿನ್ ಡಿಸ್ಟಿಲರೀಸ್ ಲಿ., ರವರು ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕು, ತೇರ್‌ದಾಳ್ ಗ್ರಾಮದಲ್ಲಿ ಸ್ಥಾಪಿಸಲಿರುವ 30 ಮೆ. ವ್ಯಾಟ್ ಸಹ ವಿದ್ಯುತ್ ಘಟಕ ಮತ್ತು 120 ಕೆ.ಎಲ್.ಪಿ.ಡಿ. ಡಿಸ್ಟಿಲರಿ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 07, ದಿನಾಂಕ 11-09-2007.
**2.** ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ ಡಿಎಸ್‌ಕೆ/ಡಿಇವಿ/84/2008-09, ದಿನಾಂಕ 28-5-2009.

**ಪ್ರಸ್ತಾವನೆ :**

ಮೇಲೆ ಓದಲಾದ (2) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಸಾವರಿನ್ ಡಿಸ್ಟಿಲರೀಸ್ ಲಿ., ರವರು ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕು, ತೇರ್‌ದಾಳ್ ಗ್ರಾಮದಲ್ಲಿ 30 ಮೆ. ವ್ಯಾಟ್ ಸಹ ವಿದ್ಯುತ್ ಘಟಕ ಮತ್ತು 120 ಕೆ.ಎಲ್.ಪಿ.ಡಿ. ಡಿಸ್ಟಿಲರಿ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 101 ಎಸ್‌ಜಿಎಫ್ 2009, ಬೆಂಗಳೂರು, ದಿನಾಂಕ: 13-4-2010**

ಸಾವರಿನ್ ಡಿಸ್ಟಿಲರೀಸ್ ಲಿ., ರವರು ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕು, ತೇರ್‌ದಾಳ್ ಗ್ರಾಮದಲ್ಲಿ 30 ಮೆ. ವ್ಯಾಟ್ ಸಹ ವಿದ್ಯುತ್ ಘಟಕ ಮತ್ತು 120 ಕೆ.ಎಲ್.ಪಿ.ಡಿ. ಡಿಸ್ಟಿಲರಿ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲಾಗಿದೆ. ಕಾರ್ಖಾನೆಗೆ ಕಬ್ಬಿನ ಮೀಸಲು ಕ್ಷೇತ್ರಗಳಿಗೆ ಸಂಬಂಧಿಸಿದಂತೆ, ಅಧಿಸೂಚನೆಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಮುಂದುವರೆದು ಸಹವಿದ್ಯುತ್ ಘಟಕ ಮತ್ತು ಡಿಸ್ಟಿಲರಿ ಘಟಕಗಳ ಸ್ಥಾಪನೆಗೆ ಅನುಮತಿಯನ್ನು ಸಂಬಂಧಪಟ್ಟ ಇಲಾಖೆಗಳಿಂದ ನಿಯಮಾನುಸಾರ ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದ್ ಕುಮಾರ್**

ಪೀಠಾಧಿಕಾರಿ (ಸಕ್ಕರೆ),

ಪಿ.ಆರ್. 992 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಶಿಕ್ಷಣ ಸಚಿವಾಲಯ**

**ವಿಷಯ :** ಕಲಿಕಾ ನ್ಯೂನತೆ (ಡಿಸ್‌ಲೆಕ್ಸಿಯಾ) ಇರುವ ಮಕ್ಕಳನ್ನು ಅಂಗವಿಕಲ ಕೋಟಾದಡಿ ವೃತ್ತಿ ಶಿಕ್ಷಣ ಕೋರ್ಸುಗಳ ಸೀಟು ಆಯ್ಕೆಗೆ ಪರಿಗಣಿಸುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಕಾರ್ಯನಿರ್ವಾಹಕ ನಿರ್ದೇಶಕರ ಪತ್ರ ಸಂಖ್ಯೆ : ಕಾನಿ/ಕೆಇಎ/ಲೀಗಲ್ ಸೆಲ್/ಸಿಆರ್-82/09-10, ದಿನಾಂಕ 31-3-2010.
**2.** ಸರ್ಕಾರದ ಸುತ್ತೋಲೆ ಸಂಖ್ಯೆ : ಇಡಿ 100 ಯೋಯೋಕ 2007, ದಿನಾಂಕ : 21-1-2008.
3. ಸರ್ಕಾರದ ಸುತ್ತೋಲೆ ಸಂಖ್ಯೆ : ಇಡಿ 142 ಯೋಯೋಕ 2008, ದಿನಾಂಕ : 21-2-2009
4. ಸರ್ಕಾರದ ಸುತ್ತೋಲೆ ಸಂಖ್ಯೆ : ಇಡಿ 142 ಯೋಯೋಕ 2009, ದಿನಾಂಕ : 6-7-2009
5. ಸರ್ಕಾರದ ಸುತ್ತೋಲೆ ಸಂಖ್ಯೆ : ಇಡಿ 370 ಯೋಯೋಕ 2009, ದಿನಾಂಕ : 17-2-2009
6. ರಾಜ್ಯ ಅಂಗವಿಕಲ ವ್ಯಕ್ತಿಗಳ ಆಯುಕ್ತರ ಪತ್ರ ಸಂಖ್ಯೆ : ಅಂ.ಅ.ನಿ./ಕಲಂ/267/2009-10/1120, ದಿನಾಂಕ : 23-3-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಕಾರ್ಯನಿರ್ವಾಹಕ ನಿರ್ದೇಶಕರು ಕಲಿಕಾ ನ್ಯೂನತೆ ಇರುವ (ಡಿಸ್‌ಲೆಕ್ಸಿಯಾ) ಮಕ್ಕಳನ್ನು ಅಂಗವಿಕಲ ಕೋಟಾದಡಿ ವೃತ್ತಿ ಶಿಕ್ಷಣ ಕೋರ್ಸುಗಳ ಪ್ರವೇಶಾತಿಗೆ ಸೀಟುಗಳ ಆಯ್ಕೆಗೆ ಶ್ರೀ ಕೆ.ಎಸ್. ಗೋಪಾಲನ್ ಇವರು ಬರೆದಿರುವ ಪತ್ರ ಹಾಗೂ ಹಲವು ದಾಖಲೆಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಸಿಇಟಿ ಪ್ರವೇಶ ನಿಯಮಾವಳಿ 2006 ನಿಯಮ 9(1)(ಜೆ) ಪ್ರಕಾರ ಅಂಗವಿಕಲ ಅಭ್ಯರ್ಥಿಗಳಿಗೆ ವೃತ್ತಿ

ಶಿಕ್ಷಣ ಕೋರ್ಸುಗಳ ಸೀಟು ಆಯ್ಕೆಯಲ್ಲಿ ಶೇ. 3ರ ಮೀಸಲಾತಿ ಕಲ್ಪಿಸಲಾಗಿದೆ ಎಂದು ಹಾಗೂ ಈ ಮೀಸಲಾತಿಗೆ Persons with Disabilty (Equal opportunity, Protection of Right and Full Participation) Act 1995 ರ ಪ್ರಕಾರ ಮೀಸಲಾತಿಯನ್ನು ನೀಡಲಾಗುತ್ತಿದೆ ಎಂದು ತಿಳಿಸಿರುತ್ತಾರೆ ಹಾಗೂ ಸದರಿ ಅಧಿನಿಯಮದ ಪ್ರಕರಣ 2(i) ನಲ್ಲಿ (i) Blindness ; (ii) Low vision ; (iii) Leprosy-cured ; (iv) Hearing impairment ; (v) Locomotor disability ; (vi) Mental retardation ; and (vii) Mental illness ; ಅಂಗವಿಕಲತೆ ಎಂದು ತಿಳಿಸಿದ್ದು ಅದರಂತೆ ಮೀಸಲಾತಿಯನ್ನು ನೀಡುತ್ತಿರುವುದಾಗಿ ತಿಳಿಸುತ್ತಾ ಪ್ರಸ್ತಾಪಿತ ಕಲಿಕಾ ನ್ಯೂನತೆ (ಡಿಸ್‌ಲೆಕ್ಸಿಯಾ) ನ್ನು Mental illness ನಡಿ ಪರಿಗಣಿಸಬಹುದಾಗಿದೆ ಎಂದು ವರದಿ ಮಾಡಿರುತ್ತಾರೆ. ಅಲ್ಲದೆ ಮಹಾರಾಷ್ಟ್ರ ಸರ್ಕಾರವು ವೃತ್ತಿ ಶಿಕ್ಷಣ ಕೋರ್ಸುಗಳ ಸೀಟು ಆಯ್ಕೆಯಲ್ಲಿ ಅಂಗವಿಕಲ ಕೋಟಾದಡಿ ಆಯ್ಕೆಯಲ್ಲಿ ಮೀಸಲಾತಿ ಕಲ್ಪಿಸಿರುವಂತೆ ರಾಜ್ಯದಲ್ಲಿಯೂ ಮೀಸಲಾತಿ ಕಲ್ಪಿಸುವ ಬಗ್ಗೆ ಮತ್ತು ಕಲಿಕಾ ನ್ಯೂನತೆ (ಡಿಸ್‌ಲೆಕ್ಸಿಯಾ) ನ್ನು ಅಂಗವಿಕಲತೆ ಎಂದು ಪರಿಗಣಿಸಿದಲ್ಲಿ ಈ ಬಗ್ಗೆ ಅಭ್ಯರ್ಥಿಯು ಯಾರಿಂದ ವೈದ್ಯಕೀಯ ವರದಿಯನ್ನು ಪಡೆದು ಸಲ್ಲಿಸಬೇಕು ಎಂಬ ಬಗ್ಗೆಯೂ ನಿರ್ದೇಶನ ನೀಡಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (2) ರಿಂದ (5) ರವರೆಗಿನ ಸರ್ಕಾರಿ ಸುತ್ತೋಲೆಗಳಲ್ಲಿ ಕಲಿಕೆ ನ್ಯೂನತೆ ಇರುವ ಅಂಗವಿಕಲ ಮಕ್ಕಳಿಗೆ ನೀಡಿರುವ ವಿಶೇಷ ಸೌಲಭ್ಯಗಳನ್ನು ಪರಿಗಣನೆಗೆ ತೆಗೆದುಕೊಂಡು ಹಾಗೂ ಮೇಲೆ ಓದಲಾದ ಕ್ರಮಾಂಕ (6)ರ ಪತ್ರದಲ್ಲಿನ ಕೋರಿಕೆ ಹಾಗೂ ದೆಹಲಿ ಉಚ್ಚ ನ್ಯಾಯಾಲಯವು ಈ ಸಂಬಂಧ ನೀಡಿರುವ ತೀರ್ಪನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 69 ಟಿಇಸಿ 2010, ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2010**

ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ನಡೆಸುವ ವೃತ್ತಿ ಶಿಕ್ಷಣ ಕೋರ್ಸುಗಳ ಸೀಟು ಆಯ್ಕೆಗೆ ಸಿಇಟಿ ಪ್ರವೇಶ ನಿಯಮಾವಳಿ 2006ರ ನಿಯಮ 9(1) (ಜಿ) ಪ್ರಕಾರ ಅಂಗವಿಕಲ ಅಭ್ಯರ್ಥಿಗಳಿಗೆ ಕಲ್ಪಿಸಿರುವ ಶೇ. 3 ರ ಮೀಸಲಾತಿಯಲ್ಲಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸೇರಿಸತಕ್ಕದ್ದು.

(1) ಈ ಮೀಸಲಾತಿಯನ್ನು Persons with Disability (Equal opportunity, Protection of Right and Full Participation) Act 1995 ರ ಪ್ರಕರಣ 2 (i) ನ (vii) Mental illness ನಡಿಯಲ್ಲಿ ಪರಿಗಣಿಸತಕ್ಕದ್ದು.

(2) ಕಲಿಕಾ ನ್ಯೂನತೆ (ಡಿಸ್‌ಲೆಕ್ಸಿಯಾ) ಇರುವ ಬಗ್ಗೆ ನಿಮ್ಹಾನ್ಸ್ ಅಥವಾ ಅಖಿಲ ಭಾರತ ದೃಕ್-ಶ್ರವಣ ಸಂಸ್ಥೆ, ಮೈಸೂರು ಅಥವಾ ಕನಿಷ್ಠ ಎಂ.ಫಿಲ್ ವಿದ್ಯಾರ್ಹತೆಯನ್ನು ಹೊಂದಿರುವ ಕ್ಲಿನಿಕಲ್ ಮನಃಶಾಸ್ತ್ರಜ್ಞರು ನೀಡುವ ಪ್ರಮಾಣ ಪತ್ರಕ್ಕೆ ಜಿಲ್ಲಾ ಸರ್ಜನ್ ಶ್ರೇಣಿಗಿಂತಲೂ ಕಡಿಮೆ ಇರದ ಸರ್ಕಾರಿ ವೈದ್ಯರು ದೃಢೀಕರಿಸಿರುವ ಪ್ರಮಾಣಪತ್ರವನ್ನು ಹೊಂದಿರುವವರಿಗೆ ಮಾತ್ರ ಈ ಮೀಸಲಾತಿಯನ್ನು ವಿಸ್ತರಿಸತಕ್ಕದ್ದು.

(3) ಅಂಗವಿಕಲ ಅಭ್ಯರ್ಥಿಗಳ ಪ್ರಮಾಣ ಪತ್ರ ಹಾಗೂ ಇವರ ಅರ್ಹತೆಯ ಬಗ್ಗೆ ವೈದ್ಯಕೀಯ ಮಂಡಳಿಯು ನೀಡುವ ವರದಿಗೆ ಬದ್ಧರಾಗಿರತಕ್ಕದ್ದು.

(4) ಈ ಸಂಬಂಧ ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ಅಂಗವಿಕಲ ಅಭ್ಯರ್ಥಿಗಳಿಗೆ ನಿಗದಿಪಡಿಸಿರುವ ಎಲ್ಲಾ ಷರತ್ತುಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 993

(ಬಿ.ಎಸ್.ನಾಗರಾಜ್)
ಸರ್ಕಾರದ ಅಧೀನ ಕಾರ್ಯದರ್ಶಿ,(ಪ್ರ)
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

**ಶಿಕ್ಷಣ ಸಚಿವಾಲಯ**

**ವಿಷಯ :** 2010-2011ನೇ ಸಾಲಿಗೆ ಖಾಸಗಿ ಅನುದಾನರಹಿತ ಇಂಜಿನಿಯರಿಂಗ್/ಆರ್ಕಿಟೆಕ್ಚರ್ ಕಾಲೇಜುಗಳಲ್ಲಿ ಪ್ರವೇಶಾತಿಗೆ ಸಂಬಂಧಿಸಿದಂತೆ ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿ ಬಗ್ಗೆ ಆದೇಶ.

**ಪ್ರಸ್ತಾವನೆ :**

ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ಅಧಿನಿಯಮ, 2006 ದಿನಾಂಕ : 1-7-2006 ರಿಂದ ಜಾರಿಗೆ ಬಂದಿದ್ದು ಅದರಂತೆ 2010-11ನೇ ಸಾಲಿಗೆ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಪ್ರವೇಶಾತಿಗೆ ಸಂಬಂಧಿಸಿದಂತೆ ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿ ಕುರಿತಂತೆ ಕರ್ನಾಟಕ ಸರ್ಕಾರ ಮತ್ತು

Consortium of Medical, Engineering and Dental Colleges of Karnataka (Comed-K) ಮತ್ತು The Karnataka Religious and Linguistic Minority Professional Colleges Association ನಡುವೆ ಆದ ಒಮ್ಮತಾಭಿಪ್ರಾಯದ ಒಪ್ಪಂದದಂತೆ ಕರ್ನಾಟಕದಲ್ಲಿರುವ ಖಾಸಗಿ ಅನುದಾನರಹಿತ ಇಂಜಿನಿಯರಿಂಗ್/ಆರ್ಕಿಟೆಕ್ಚರ್ ಕಾಲೇಜುಗಳಲ್ಲಿ ಸರ್ಕಾರದ ಪಾಲಿನ ಒಟ್ಟು ಸೀಟುಗಳ ಪೈಕಿ ಶೇಕಡಾ 50 ರಷ್ಟು ಸೀಟುಗಳನ್ನು ಪ್ರತಿ ಕಾಲೇಜಿನಲ್ಲಿ, ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ 20,000 ವರೆಗೆ ರ್‍ಯಾಂಕ್ ಪಡೆದ ಹಾಗೂ ಆರ್ಥಿಕವಾಗಿ ಹಿಂದುಳಿದ ಅಭ್ಯರ್ಥಿಗಳಿಗೆ ಮಾತ್ರ ರೂ. 15,000/–ಗಳ ಶುಲ್ಕ (ಈ ವರ್ಗದಡಿ ಪ್ರವೇಶಾತಿ ಪಡೆದಂತಹ ವಿದ್ಯಾರ್ಥಿಗಳಿಗೆ ಅನುಕೂಲವಾಗುವ ದೃಷ್ಟಿಯಿಂದ ರೂ. 10,000/– ಸಹಾಯಧನವನ್ನು ಸಂಬಂಧಿಸಿದ ಶಿಕ್ಷಣ ಸಂಸ್ಥೆಗಳಿಗೆ ಸರ್ಕಾರದಿಂದ ಪ್ರಥಮ ವರ್ಷ ಪೂರ್ಣಗೊಳ್ಳುವ ಮುನ್ನ ನೀಡುವ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು) ಹಾಗೂ ಉಳಿದ ಶೇ. 50 ರಷ್ಟು ಸೀಟುಗಳನ್ನು ರೂ. 30,000/–ಗಳ ಶುಲ್ಕಕ್ಕೆ ಹಂಚಿಕೆ ಮಾಡಬೇಕಾಗಿರುತ್ತದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 215 ಟಿಇಸಿ 2009, ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2010**

2010–11ನೇ ಸಾಲಿಗೆ ಇಂಜಿನಿಯರಿಂಗ್/ಆರ್ಕಿಟೆಕ್ಚರ್ ಕಾಲೇಜುಗಳಲ್ಲಿ ಪ್ರವೇಶಾತಿಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯದಲ್ಲಿನ ಖಾಸಗಿ ಅನುದಾನರಹಿತ ಕಾಲೇಜುಗಳಲ್ಲಿ ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿಯು ಈ ಕೆಳಕಂಡ ನಿಬಂಧನೆಗೆ ಒಳಪಟ್ಟು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಂತೆ ಇರುತ್ತದೆ.

1. ರೂ. 15,000/– ಹಾಗೂ ರೂ. 30,000/– ಶುಲ್ಕದ ಸೀಟುಗಳಿಗೆ ಪ್ರತ್ಯೇಕ ಸೀಟ್ ಮ್ಯಾಟ್ರಿಕ್ಸ್ ಇರುವುದಿಲ್ಲ.

2. ಖಾಸಗಿ ಅನುದಾನರಹಿತ ಇಂಜಿನಿಯರಿಂಗ್/ಆರ್ಕಿಟೆಕ್ಚರ್ ಕಾಲೇಜುಗಳಲ್ಲಿಯ ಸರ್ಕಾರದ ಪಾಲಿನ ಒಟ್ಟು ಇಂಜಿನಿಯರಿಂಗ್ ಸೀಟುಗಳ ಪೈಕಿ ಪ್ರತಿ ಕಾಲೇಜಿನಲ್ಲಿ ಶೇಕಡಾ 50 ರಷ್ಟು ಸೀಟುಗಳನ್ನು ರೂ. 15,000/–ಶುಲ್ಕಕ್ಕೆ ಹಾಗೂ ಉಳಿದ ಶೇಕಡಾ 50ರಷ್ಟು ಸೀಟುಗಳನ್ನು ರೂ. 30,000/– ಶುಲ್ಕಕ್ಕೆ ಹಂಚಿಕೆ ಮಾಡಬೇಕು.

3. ರೂ. 15,000/– ಶುಲ್ಕದ ಸೀಟು ಆಯ್ಕೆಗೆ ಯಾವುದೇ ವರ್ಗಕ್ಕೆ ಸೇರಿದ ಅಭ್ಯರ್ಥಿಯ ವಾರ್ಷಿಕ ಆದಾಯ ಮಿತಿ ರೂ. 2.00 ಲಕ್ಷದ ಒಳಗಡೆ ಇರಬೇಕು ಮತ್ತು ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ ರ್‍ಯಾಂಕನ್ನು 20000ದೊಳಗೆ ಪಡೆದಿರಬೇಕು.

4. ಅನುದಾನರಹಿತ ಇಂಜಿಯರಿಂಗ್ ಕಾಲೇಜುಗಳಲ್ಲಿ ಹಾಗೂ ಅನುದಾನಿತ ಕಾಲೇಜುಗಳಲ್ಲಿನ ಅನುದಾನರಹಿತ ಕೋರ್ಸ್‌ಗಳಲ್ಲಿನ ಸರ್ಕಾರದ ಪಾಲಿನ ಒಟ್ಟು ಸೀಟುಗಳ ಪೈಕಿ ಶೇಕಡ 50ರಷ್ಟು ಸೀಟುಗಳನ್ನು ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ 20,000ದ ಒಳಗಡೆ ರ್‍ಯಾಂಕ್ ಪಡೆದ ಅರ್ಹ ಅಭ್ಯರ್ಥಿಗಳಿಗೆ ರೂ. 15,000/– ಶುಲ್ಕಕ್ಕೆ ಹಂಚಿಕೆ ಮಾಡಬೇಕು (ಆದರೆ ಪ್ರತಿ ಕಾಲೇಜಿನಲ್ಲಿ ಪ್ರತಿ ಕೋರ್ಸಿನಲ್ಲಿ ಶೇಕಡಾ 50ರಷ್ಟು ಸೀಟುಗಳನ್ನು ರೂ. 15,000/– ಶುಲ್ಕಕ್ಕೆ ಕಡ್ಡಾಯವಾಗಿ ಹಂಚಿಕೆ ಮಾಡಬೇಕೆಂಬ ನಿರ್ಬಂಧ ಇರುವುದಿಲ್ಲ.)

5. ಮೀಸಲಾತಿ ವರ್ಗದ ಅಡಿ ಬರುವ ಅಭ್ಯರ್ಥಿ ನಿರ್ದಿಷ್ಟ ಕಾಲೇಜಿನಲ್ಲಿ ಸೀಟು ಆಯ್ಕೆ ಬಯಸುವ ಸಮಯದಲ್ಲಿ ಆ ಕಾಲೇಜಿನಲ್ಲಿ ರೂ. 15,000/– ಶುಲ್ಕದ ಸೀಟು ಆಯ್ಕೆಗೆ ಲಭ್ಯವಿಲ್ಲದಿದ್ದಲ್ಲಿ ಅಂತಹವರು ಆ ಕಾಲೇಜಿನಲ್ಲಿ ಸೀಟು ಆಯ್ಕೆಗೆ ರೂ. 30,000/– ಶುಲ್ಕ ಪಾವತಿಸಬೇಕಾಗುತ್ತದೆ.

6. ಖಾಸಗಿ ಅನುದಾನರಹಿತ ಪ್ರತಿ ಇಂಜಿನಿಯರಿಂಗ್/ಆರ್ಕಿಟೆಕ್ಚರ್ ಕಾಲೇಜುಗಳಲ್ಲಿ ಸರ್ಕಾರದ ಪಾಲಿನ ಶೇಕಡಾ 50ರಷ್ಟು ಸೀಟುಗಳನ್ನು ರೂ. 15,000/–ಶುಲ್ಕಕ್ಕೆ ತುಂಬಲೇಬೇಕೆಂಬ ನಿರ್ಬಂಧ ಇರುವುದಿಲ್ಲ. ಆದರೆ ರೂ. 15,000/– ಶುಲ್ಕದ ಸೀಟುಗಳನ್ನು ಭರ್ತಿ ಮಾಡುವಾಗ ಪ್ರತಿ ಕಾಲೇಜಿನಲ್ಲಿ ಗರಿಷ್ಠ ಶೇ. 50 ರಷ್ಟನ್ನು ಮಾತ್ರ ತುಂಬಬೇಕು.

7. ಅನುದಾನರಹಿತ ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ಸರ್ಕಾರದ ಪಾಲಿನ ಒಟ್ಟು ಸೀಟುಗಳಲ್ಲಿ ಶೇ. 50 ರಷ್ಟು ಸೀಟುಗಳಿಗೆ ಶುಲ್ಕ ರಿಯಾಯಿತಿ ಇದೆಯೇ ಹೊರತು ಸೀಟು ಮೀಸಲಾತಿ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಸ್. ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

ಅನುಬಂಧ

ಸರ್ಕಾರಿ ಆದೇಶ ಸಂಖ್ಯೆ : ಇಡಿ 215 ಟಿಇಸಿ 2010, ಬೆಂಗಳೂರು, ದಿನಾಂಕ 13ನೇ ಏಪ್ರಿಲ್ 2010
ಸರ್ಕಾರಿ ಮತ್ತು ಖಾಸಗಿ/ಅನುದಾನಿತ ವೈದ್ಯಕೀಯ, ದಂತ ಮತ್ತು ಇಂಜಿನಿಯರಿಂಗ್ ಕಾಲೇಜುಗಳು
(ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿ)

| | ಸರ್ಕಾರಿ ಕಾಲೇಜುಗಳು (ಶೇ. 100 ಸರ್ಕಾರಿ ಸೀಟುಗಳು) ಶುಲ್ಕ (ರೂ.ಗಳಲ್ಲಿ–ವಿ.ವಿ. ಶುಲ್ಕ ಸೇರಿ) | ಖಾಸಗಿ ಅನುದಾನಿತ ಕಾಲೇಜುಗಳು (ಶೇ. 95 ಸರ್ಕಾರಿ ಸೀಟುಗಳು) ಶುಲ್ಕ (ರೂ.ಗಳಲ್ಲಿ ವಿ.ವಿ. ಶುಲ್ಕ ಸೇರಿ)<br>ಶೇಕಡಾ 95 ಸರ್ಕಾರಿ ಸೀಟುಗಳು ** (ಕರ್ನಾಟಕ ಪರೀಕ್ಷೆ ಪ್ರಾಧಿಕಾರದ ಮೂಲಕ) | ಶೇಕಡ 5 ಆಡಳಿತ ಮಂಡಳಿ ಸೀಟುಗಳು ** |
|---|---|---|---|
| ವೈದ್ಯಕೀಯ | 16,700 | --- | --- |
| ದಂತ | 14,400 | --- | --- |
| ಇಂಜಿನಿಯರಿಂಗ್/ ಟೆಕ್ನಾಲಜಿ/ಆರ್ಕಿಟೆಕ್ಚರ್ | 18,090 | 18,090 | 1,25,000ಗಳ ಮಿತಿಗೆ ಒಳಪಟ್ಟು |

** ಸರ್ಕಾರದ ಆದೇಶ ಸಂಖ್ಯೆ : ಇಡಿ 50 ಟಿಇಸಿ 2002,
ದಿನಾಂಕ : 22–6–2002 ರನ್ವಯ ನಿಗದಿಪಡಿಸಿದೆ.

ಬಿ.ಎಸ್. ನಾಗರಾಜ್
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

**ಖಾಸಗಿ ವೈದ್ಯಕೀಯ, ದಂತ ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಕಾಲೇಜುಗಳು (ಅಲ್ಪಸಂಖ್ಯಾತವಲ್ಲದ ಸಂಸ್ಥೆಗಳು)**
**(ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿ) (ವಿಶ್ವವಿದ್ಯಾಲಯ ಶುಲ್ಕ ಹೊರತುಪಡಿಸಿ)**

| | ವೈದ್ಯಕೀಯ | | | ದಂತ | | | ಇಂಜಿನಿಯರಿಂಗ್ ಟೆಕ್ನಾಲಜಿ/ಆರ್ಕಿಟೆಕ್ಚರ್ | | | |
|---|---|---|---|---|---|---|---|---|---|---|
| | ಸರ್ಕಾರ | ಆಡಳಿತ ಮಂಡಳಿ | | ಸರ್ಕಾರ | ಆಡಳಿತ ಮಂಡಳಿ | | ಸರ್ಕಾರ | | ಆಡಳಿತ ಮಂಡಳಿ | |
| ಸೀಟು ಹಂಚಿಕೆ ಶೇಕಡವಾರು | **42%** | **38%** | **20% (15+5)** | **35%** | **45%** | **20% (15+5)** | **50%** | | **25%** | **25% (15+10)** |
| ಶುಲ್ಕ ರೂ.ಗಳಲ್ಲಿ (ಪ್ರತಿ ವರ್ಷಕ್ಕೆ) | **35,000** | **3,25,000** ಗಳ ಮಿತಿಗೊಳಪಟ್ಟು | --- | **25,000** | **2,30,000** ಗಳ ಮಿತಿಗೊಳಪಟ್ಟು | --- | ಭಾಗ–**I** ಸಿಇಟಿಯಲ್ಲಿ **20000** ದೊಳಗೆ ರ್‍ಯಾಂಕ್ ಪಡೆದ ಪ್ರತಿಭಾನ್ವಿತ ಬಡ ವಿದ್ಯಾರ್ಥಿಗಳಿಗೆ ಶೇ. 25 ರಷ್ಟು ಸೀಟುಗಳು **15,000–00** | ಭಾಗ– **II** ಉಳಿದ ಶೇ. 25ರಷ್ಟು ಸೀಟುಗಳು **30,000–00** | **1,25,000** ಗಳ ಮಿತಿಗೊಳಪಟ್ಟು | --- |

**ಬಿ.ಎಸ್. ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

ಖಾಸಗಿ ವೈದ್ಯಕೀಯ, ದಂತ ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಕಾಲೇಜುಗಳು (ಅಲ್ಪಸಂಖ್ಯಾತ ಸಂಸ್ಥೆಗಳು)
(ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿ) ವಿಶ್ವವಿದ್ಯಾಲಯ ಶುಲ್ಕ ಹೊರತುಪಡಿಸಿ)

| | ವೈದ್ಯಕೀಯ | | | ದಂತ | | | ಇಂಜಿನಿಯರಿಂಗ್/ ಟೆಕ್ನಾಲಜಿ/ಆರ್ಕಿಟೆಕ್ಚರ್ | | | |
|---|---|---|---|---|---|---|---|---|---|---|
| | ಸರ್ಕಾರ | ಆಡಳಿತ ಮಂಡಳಿ | | ಸರ್ಕಾರ | ಆಡಳಿತ ಮಂಡಳಿ | | ಸರ್ಕಾರ | | ಆಡಳಿತ ಮಂಡಳಿ | |
| ಸೀಟು ಹಂಚಿಕೆ ಶೇಕಡವಾರು | 27% | 53% | 20% | 25% | 55% | 20% | ಕ್ಯಾಟಗರಿ–I ಸಿಇಟಿಯಲ್ಲಿ 20000 ದೊಳಗೆ ರ್‍ಯಾಂಕ್ ಪಡೆದ ಪ್ರತಿಭಾನ್ವಿತ ಬಡ ವಿದ್ಯಾರ್ಥಿಗಳಿಗೆ ಶೇ. 20 ರಷ್ಟು ಸೀಟುಗಳು | ಕ್ಯಾಟಗರಿ–II ಉಳಿದ ಶೇ. 20ರಷ್ಟು ಸೀಟುಗಳು | 30% | 30% (20+10) |
| ಶುಲ್ಕ ರೂ.ಗಳಲ್ಲಿ | 35,000 | 3,25,000 ಗಳ ಮಿತಿಗೊಳಪಟ್ಟು | --- | 25,000 | 2,30,000 ಗಳ ಮಿತಿಗೊಳಪಟ್ಟು | --- | 20,000–00 | 30,000–00 | 1,25,000 ಗಳ ಮಿತಿಗೊಳಪಟ್ಟು | --- |

**ಬಿ.ಎಸ್. ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

ಪಿ.ಆರ್. 994

## ಒಳಾಡಳಿತ ಸಚಿವಾಲಯ

**ವಿಷಯ :** ಒಳಾಡಳಿತ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್), ಇವರ ವಾಹನ ಸಂಖ್ಯೆ : ಕೆಎ–01 ಜಿ–4300 ವಾಹನಕ್ಕೆ ಸರ್ವಿಸಿಂಗ್ ಮಾಡಿದ್ದಕ್ಕೆ ಹಣ ಮಂಜೂರಾತಿ ನೀಡುವ ಬಗ್ಗೆ

**ಓದಲಾಗಿದೆ :** ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್) ಯವರ ಹಿರಿಯ ಆಪ್ತ ಸಹಾಯಕಿ, ಒಳಾಡಳಿತ ಇಲಾಖೆ, ಇವರ ಟಿಪ್ಪಣಿ ಸಂಖ್ಯೆ : ಒಇ/12/ಕಾ/2010, ದಿನಾಂಕ : 6–4–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಟಿಪ್ಪಣಿಯಲ್ಲಿ ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್) ಒಳಾಡಳಿತ ಇಲಾಖೆ, ಇವರ ವಾಹನ ಸಂಖ್ಯೆ : ಕೆಎ–01 ಜಿ 4300 ವಾಹನವು ನಿಯಮಾನುಸಾರ 5000 ಕಿ.ಮೀ. ಕ್ರಮಿಸಿದಾಗ ವಾಹನದ ಸರ್ವಿಸಿಂಗ್ ಮಾಡಲಾಗಿರುತ್ತದೆ. ಪ್ರಸ್ತುತ ಲೆಕ್ಕಪತ್ರ ಶಾಖೆಯು ರೂ. 1000–00 ಮೀರಿದ ವೆಚ್ಚಕ್ಕೆ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುವ ಅನುಸಾರ ದಿನಾಂಕ : 2–3–2010 ರಂದು ಮೆ॥ ಶೇಷಾದ್ರಿಪುರಂ ಸರ್ವಿಸ್ ಸ್ಟೇಷನ್, ಬೆಂಗಳೂರು, ಇಲ್ಲಿ ಸರ್ವಿಸಿಂಗ್ ಮಾಡಿದ್ದು, ಅದಕ್ಕೆ ತಗುಲಿದ ವೆಚ್ಚ ರೂ. 6784–00ಗಳ (ಆರು ಸಾವಿರದ ಏಳುನೂರ ಎಂಭತ್ತನಾಲ್ಕು ರೂಪಾಯಿಗಳು ಮಾತ್ರ)ನ್ನು ಸದರಿ ಸಂಸ್ಥೆಗೆ ಪಾವತಿಸಲು ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 39 ಸಶಾಶಾ 2009, ಬೆಂಗಳೂರು, ದಿನಾಂಕ: 15–4–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್) ಯವರ ವಾಹನ ಸಂಖ್ಯೆ : ಕೆಎ–01 ಜಿ 4300 ವಾಹನಕ್ಕೆ ದಿನಾಂಕ : 2–3–2010 ರಂದು ಮೆ॥ ಶೇಷಾದ್ರಿಪುರಂ ಸರ್ವಿಸ್ ಸ್ಟೇಷನ್, ಬೆಂಗಳೂರು, ಇವರಿಂದ ಸರ್ವಿಸಿಂಗ್ ಮಾಡಿಸಿದ ಮೊತ್ತ ರೂ. 6784–00 ಗಳ (ಆರು ಸಾವಿರದ ಏಳುನೂರ ಎಂಭತ್ತನಾಲ್ಕು ರೂಪಾಯಿಗಳು ಮಾತ್ರ)ನ್ನು ಸದರಿ ಸಂಸ್ಥೆಗೆ ಪಾವತಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಲೆಕ್ಕ ಶೀರ್ಷಿಕೆ "2052–Sectt General Services-090-Sectt-01 KGS-195 TRANSPORT EXPENSES" ರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–7–1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿದ ಆರ್ಥಿಕ ಅಧಿಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಟಿ. ಕೃಷ್ಣಮೂರ್ತಿ

ಪಿ.ಆರ್. 995 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಸಮನ್ವಯ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

ಸಂಖ್ಯೆ :ಸಿಐ/521/ಎಸ್‌ಪಿಐ/2005 ಬೆಂಗಳೂರು, ದಿನಾಂಕ : 12ನೇ ಏಪ್ರಿಲ್ 2010

### ತಿದ್ದುಪಡಿ ಆದೇಶ

**ವಿಷಯ :** ರಾಯಚೂರು ಜಿಲ್ಲೆಯ ರಾಯಚೂರು ಗ್ರೋಥ ಸೆಂಟರ್‌ನಲ್ಲಿ ಮೆ : ಸುರಾನ ಇಂಡಸ್ಟ್ರೀಸ್ ಲಿಮಿಟೆಡ್ ಸಂಸ್ಥೆಯವರು ಇಂಟಿಗ್ರೇಟೆಡ್ ಸ್ಟೀಲ್ ಪ್ಲಾಂಟ್ ಪ್ರಾರಂಭಿಸುವ ಕುರಿತು.

**ಉಲ್ಲೇಖ :** 1. ಸರ್ಕಾರದ ಆದೇಶ ಸಂಖ್ಯೆ : ಸಿಐ 521 ಎಸ್‌ಪಿಐ 2005, ದಿನಾಂಕ : 16–01–2006.

2. ಆಯುಕ್ತರು, (ಕೈಅ) ಖನಿಜ ಭವನ ಬೆಂಗಳೂರು ಇವರ ಪತ್ರ ಸಂಖ್ಯೆ : ಕೈಅ/ಇ3/ ರಾಯಚೂರು/ಪ್ರತೆವಿ/ಸುರಾನ/2009–10, ದಿನಾಂಕ : 24–03–2010

3. ನೂತನ ಕೈಗಾರಿಕಾ ನೀತಿ 2009–14ರ ಅನುಬಂಧ–5ರ ನಿಬಂಧನೆಗಳು.

ಮೆ : ಸುರಾನಾ ಇಂಡಸ್ಟ್ರೀಸ್ ಲಿ., ಇವರಿಗೆ ದಿ : 06–06–2005 ರಂದು ನಡೆದ ರಾಜ್ಯ ಉನ್ನತ ಮಟ್ಟದ ಸಮಿತಿ ಸಭೆಯಲ್ಲಿ ರೂ. 562.09 ಕೋಟಿ ವೆಚ್ಚದಲ್ಲಿ ಪ್ರತಿದಿನ 3 x 350 ಟನ್ ಸಾಮರ್ಥ್ಯದ ಸ್ಪಾಂಜ್ ಐರನ್ ಉತ್ಪಾದನೆ ಮತ್ತು ಸಮಗ್ರ ಉಕ್ಕು ತಯಾರಿಕಾ ಕಾರ್ಖಾನೆಯನ್ನು 40 MW ವಿದ್ಯುಚ್ಛಕ್ತಿ ಉತ್ಪಾದನಾ ಯೋಜನೆಯೊಂದಿಗೆ ಸ್ಥಾಪಿಸಲು ಅನುಮೋದನೆ ನೀಡಲಾಗಿದ್ದು, ಅನುಷ್ಠಾನ ಮಾಡಲು ದಿ : 16–01–2006 ರಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಸಿಐ 521 ಎಸ್‌ಪಿಐ 2005 ಹೊರಡಿಸಲಾಗಿದೆ. ಈ ಆದೇಶದಲ್ಲಿ ಪ್ರೋತ್ಸಾಹ ಮತ್ತು ರಿಯಾಯಿತಿಯಡಿ "ಉಕ್ಕು ಉತ್ಪಾದನಾ ಘಟಕವು (ವಿದ್ಯುಚ್ಛಕ್ತಿ ಘಟಕವನ್ನು ಹೊರತುಪಡಿಸಿ) ರಾಜ್ಯ ಕೈಗಾರಿಕಾ ನೀತಿ 2001–06ರನ್ವಯ ರಿಯಾಯತಿಗಳನ್ನು ಪಡೆಯಲು ಅರ್ಹವಿರುತ್ತದೆ" ಎಂಬುದರ ಬದಲಾಗಿ "ಕೈಗಾರಿಕೆ ನೀತಿ 2006–11 ರ ಪ್ರಕಾರ ಉತ್ತೇಜನ ಮತ್ತು ರಿಯಾಯಿತಿ ಸೌಲಭ್ಯಗಳಿಗೆ ಅರ್ಹವಿರುತ್ತದೆ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಪರ್ಣ ಪಾವಟೆ**

ಪೀಠಾಧಿಕಾರಿ (ತಾಂತ್ರಿಕ ಕೋಶ)

1003 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಆನೇಕಲ್ ತಾಲ್ಲೂಕು ಅತ್ತಿಬೆಲೆ ಹೋಬಳಿ ಕೃಷ್ಣ ಸಾಗರ ಗ್ರಾಮದ ಸರ್ವೆ ನಂ.37ರ ಜಮೀನಿನ ಮೂಲ ದಾಖಲೆಗಳನ್ನು ತಿದ್ದಿರುವ ಬಗ್ಗೆ.

**ಓದಲಾಗಿದೆ :** 1. ಕಾರ್ಯದರ್ಶಿ ಕಂದಾಯ ಹಾಗೂ ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ, ಬೆಂಗಳೂರು ಇವರ ಪತ್ರಸಂಖ್ಯೆ : ಟಿಎಫ್ 464/2009–10 ದಿನಾಂಕ : 01–03–2010.

2. ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಆದೇಶ ಸಂಖ್ಯೆ : ಸಿಸಿಎ (2) ಸಿಆರ್ 89/2009–10 ದಿನಾಂಕ : 01/03/2010.

**ಪ್ರಸ್ತಾವನೆ :**

ಆನೇಕಲ್ ತಾಲ್ಲೂಕು ಅತ್ತಿಬೆಲೆ ಹೋಬಳಿ ಕೃಷ್ಣ ಸಾಗರ ಗ್ರಾಮದ ಸರ್ವೆ ನಂ 37ರ ಜಮೀನಿನ ಮೂಲ ದಾಖಲೆಗಳನ್ನು ಅಕ್ರಮವಾಗಿ ತಿದ್ದಿ ಸರ್ಕಾರಿ ಜಮೀನು ಖಾಸಗಿ ವ್ಯಕ್ತಿಗಳ ಪಾಲಾಗಲು ಸಹಕರಿಸಿರುವುದರಿಂದ ಈ ಕೆಳಕಂಡ ಅಧಿಕಾರಿ/ ನೌಕರರು ಭಾಗಿಯಾಗಿದ್ದು ಕ್ರಮ ಸಂಖ್ಯೆ : 2 ರಿಂದ 5ರಲ್ಲಿರುವ ನೌಕರರುಗಳನ್ನು ಅಮಾನತ್ತುಗೊಳಿಸಲು

ಜಿಲ್ಲಾಧಿಕಾರಿಗಳು. ಬೆಂಗಳೂರು ನಗರ ಜಿಲ್ಲೆ ಇವರನ್ನು ಕೋರಲಾಗಿದೆಯೆಂದು ತಿಳಿಸುತ್ತಾ, ಕ್ರಮ ಸಂಖ್ಯೆ (1) ರಲ್ಲಿರುವ ಶ್ರೀ ಎನ್. ಸತೀಶ್, ವಿಶೇಷ ತಹಶೀಲ್ದಾರ್, ಆನೇಕಲ್ ತಾಲ್ಲೂಕು ಇವರನ್ನು ಅಮಾನತ್ತುಗೊಳಿಸಿ ಇಲಾಖಾ ವಿಚಾರಣೆ ನಡೆಸುವಂತೆ ಕಾರ್ಯದರ್ಶಿ ಕಂದಾಯ ಹಾಗೂ ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ, ಬೆಂಗಳೂರು ಇವರು ಉಲ್ಲೇಖ (1)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

1) ಶ್ರೀ ಎನ್. ಸತೀಶ್, ವಿಶೇಷ ತಹಶೀಲ್ದಾರ್, ಆನೇಕಲ್ ತಾಲ್ಲೂಕು, ಆನೇಕಲ್
2) ಶ್ರೀ ನವೀನ್, ರೆಕಾರ್ಡ್ ಕೀಪರ್, ಆನೇಕಲ್ ತಾಲ್ಲೂಕು, ಆನೇಕಲ್
3) ಶ್ರೀ ಎಸ್.ಜೆ.ಪಿ. ಮಿರಜ್‌ಕರ್, ರಾಜಸ್ವ ನಿರೀಕ್ಷಕರು, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಬೆಂಗಳೂರು
4) ಶ್ರೀ ಕೆ.ಜೆ. ಧನಂಜಯ, ಪ್ರಥಮ ದರ್ಜೆ ಸಹಾಯಕರು, ತಾಲ್ಲೂಕು ಕಛೇರಿ, ಆನೇಕಲ್ ತಾಲ್ಲೂಕು, ಆನೇಕಲ್
5) ಶ್ರೀ ಎ.ಆರ್. ಲಿಂಗಪ್ಪ, ಉಪ ತಹಶೀಲ್ದಾರ್, ನಾಡ ಕಛೇರಿ, ಅತ್ತಿಬೆಲೆ

ಕಾರ್ಯದರ್ಶಿ ಹಾಗೂ ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ, ಬೆಂಗಳೂರು ಇವರ ವರದಿಯನ್ನು ಪರಿಶೀಲಿಸಲಾಗಿ ಮೇಲ್ಕಂಡ ಅಧಿಕಾರಿ/ನೌಕರರು ಆನೇಕಲ್ ತಾಲ್ಲೂಕು ಅತ್ತಿಬೆಲೆ ಹೋಬಳಿ ಕೃಷ್ಣಸಾಗರ ಗ್ರಾಮದ ಸರ್ವೆ ನಂ. 37ರ ಜಮೀನಿನ ಮೂಲ ದಾಖಲೆಗಳನ್ನು ಅಕ್ರಮವಾಗಿ ತಿದ್ದಿ ಸರ್ಕಾರಿ ಜಮೀನು ಖಾಸಗಿ ವ್ಯಕ್ತಿಗಳ ಪಾಲಾಗಲು ಸಹಕರಿಸಿರುವುದು ದಾಖಲೆಗಳ ಆಧಾರದ ಮೇಲೆ ದೃಢಪಡುವುದರಿಂದ ಈ ಅಧಿಕಾರಿ/ ನೌಕರರ ವಿರುದ್ಧ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬಂದಿರುವುದರಿಂದ ಇವರು ದಾಖಲೆಗಳನ್ನು ತಿದ್ದುವ ಹಾಗೂ ಸಾಕ್ಷಿಗಳ ಮೇಲೆ ಪ್ರಭಾವ ಬೀರುವ ಸಾಧ್ಯತೆ ಇರುವುದರಿಂದ ಇವರುಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ಅಮಾನತ್ತುಗೊಳಿಸಲು ತೀರ್ಮಾನಿಸಲಾಗಿದೆ. ಈಗಾಗಲೇ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ಕ್ರಮ ಸಂಖ್ಯೆ : 2 ರಿಂದ 5ರವರೆಗಿನ ಸಿಬ್ಬಂದಿಗಳನ್ನು ದಿನಾಂಕ : 01/03/2010ರ ಆದೇಶದಲ್ಲಿ ಅಮಾನತ್ತುಗೊಳಿಸಿರುತ್ತಾರೆ. ಕ್ರಮ ಸಂಖ್ಯೆ : (1) ರಲ್ಲಿರುವ ವಿಶೇಷ ತಹಶೀಲ್ದಾರ್, ಆನೇಕಲ್ ತಾಲ್ಲೂಕು ಶ್ರೀ ಎನ್. ಸತೀಶ್ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 17 ಎಡಿಇ 2010, ಬೆಂಗಳೂರು, ದಿನಾಂಕ : 31ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10 (1) ಮತ್ತು 10 (3) ರನ್ವಯ ಶ್ರೀ ಎನ್. ಸತೀಶ್, ವಿಶೇಷ ತಹಶೀಲ್ದಾರ್, ಆನೇಕಲ್ ತಾಲ್ಲೂಕು, ಆನೇಕಲ್ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿಯಿರಿಸಿ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಲ್ಲಿರಿಸಿ ಆದೇಶಿಸಿದೆ.

ಸದರಿ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಪ್ರಕಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ ಹಾಗೂ ಜಿಲ್ಲಾಧಿಕಾರಿಗಳ ಅನುಮತಿ ಪಡೆಯದೇ ಕೇಂದ್ರಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

1004 ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಲ್ಲಿನ ಸರ್ಕಾರೀ ಜಮೀನುಗಳ ಅತಿಕ್ರಮಣ ಮತ್ತು ಒತ್ತುವರಿ ಪತ್ತೆ ಹಚ್ಚಲು ಎನ್‌ಫೋರ್ಸ್‌ಮೆಂಟ್ ಸೆಲ್‌ಗೆ (ಅನಧಿಕೃತ ಕಟ್ಟಡಗಳ ನಿರ್ಮಾಣ ತಡೆ ಕೋಶ) ತಾತ್ಕಾಲಿಕವಾಗಿ ಹುದ್ದೆಗಳನ್ನು ಸೃಜಿಸಿದ್ದು, ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರ ಪತ್ರ ಸಂ: ಪಿಯುಸಿ (ಜಾದ) ಸಿಬ್ಬಂದಿ/ಸಿಆರ್/13/07–08, ದಿನಾಂಕ : 20-01–2009
2. ಸರ್ಕಾರದ ಆದೇಶ ಸಂ : ಕಂಇ 77 ಎಎಸ್‌ಡಿ 2008, ದಿನಾಂಕ : 26–04–2008 ಮತ್ತು 28–06–2008.
3. ಸರ್ಕಾರದ ಆದೇಶ ಸಂ : ಕಂಇ 23 ಬಿಎಂಎಂ 2007, ದಿನಾಂಕ : 24–02–2007
4. ಸರ್ಕಾರದ ಆದೇಶ ಸಂ : ಕಂಇ 134 ಎಎಸ್‌ಡಿ 2009, ದಿನಾಂಕ : 23–03–2009.
5. ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರ ಪತ್ರ ಸಂ: ಪಿಯುಸಿ (ಜಾದ) ಸಿಬ್ಬಂದಿ/ಸಿಆರ್/13/07–08, ದಿನಾಂಕ : 06-01–2010

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಆದೇಶ ಸಂ : ಕಂಈ 77 ಎಎಸ್‌ಡಿ 2008, ದಿನಾಂಕ : 26-04-2008 ಮತ್ತು 28-06-2008ರ ಆದೇಶದಲ್ಲಿ (1) ತಹಶೀಲ್ದಾರ್-2 ಹುದ್ದೆಗಳು, (2) ಶಿರಸ್ತೇದಾರ್/ವ್ಯವಸ್ಥಾಪಕರು-2 ಹುದ್ದೆಗಳನ್ನು ದಿನಾಂಕ : 01-02-2008 ರಿಂದ 02-02-09ರವರೆಗೆ ಮತ್ತು ರಿ-ಡಿಪ್ಲಾಯ್‌ಮೆಂಟ್ ಮೂಲಕ ಕಾರ್ಯ ನಿರ್ವಹಿಸುತ್ತಿರುವ (1) ಶಿರಸ್ತೇದಾರ್ – 5 ಹುದ್ದೆಗಳು, (2) ಪ್ರ.ದ.ಸ.-7 ಹುದ್ದೆಗಳು, (3) ದ್ವಿ.ದ.ಸ. -1 ಹುದ್ದೆ ಇವುಗಳನ್ನು ದಿನಾಂಕ : 29-01-2008ರಿಂದ 28-01-2009ರವರೆಗೆ ಮೇಲ್ಕಂಡ ಸೃಜಿಸಲಾದ ಹುದ್ದೆಗಳನ್ನು ಮುಂದುವರೆಸಲಾಗಿತ್ತು ಮತ್ತು ಮೇಲೆ ಓದಲಾದ (3)ರ ಆದೇಶದಲ್ಲಿ ಸಹಾಯಕ ಆಯುಕ್ತರ 2 ಹುದ್ದೆಗಳಲ್ಲಿ ಒಂದು ಹುದ್ದೆ ಖಾಲಿಯಿದ್ದು, ಇನ್ನೊಂದು ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಪ್ರಸ್ತುತ ಅನಧಿಕೃತ ಕಟ್ಟಡಗಳ ನಿರ್ಮಾಣ ತಡೆಕೋಶ (ಎನ್‌ಫೋರ್ಸ್‌ಮೆಂಟ್‌ಸೆಲ್)ದಲ್ಲಿ ಬೆಂಗಳೂರು ಸುತ್ತ ಮುತ್ತಲಿನ ಬೆಲೆ ಬಾಳುವ ಸರ್ಕಾರಿ ಜಮೀನುಗಳ ಒತ್ತುವರಿ ಪ್ರಕರಣಗಳನ್ನು ಪತ್ತೆ ಹಚ್ಚಿ ಒತ್ತುವರಿ ಜಮೀನು ತೆರವುಗೋಳಿಸುವ ಕಾರ್ಯವನ್ನು ಸಮಾರೋಪಾದಿಯಲ್ಲಿ ಮಾಡಲಾಗುತ್ತಿದೆ. ನಿರಂತರವಾಗಿ ಅತಿಕ್ರಮಣ ತಡೆ, ಒತ್ತುವರಿ ತೆರವುಗೊಳಿಸುವ ಮೊಕದ್ದಮೆಯನ್ನು ಹೂಡಿ ಸರ್ಕಾರಿ ಸ್ವತ್ತನ್ನು ಉಳಿಸಿಕೊಳ್ಳುವ ಬಗ್ಗೆ ಹಾಗೂ ಹೆಚ್ಚಿನ ಕಾರ್ಯ ಇರುವುದರಿಂದ, ಹುದ್ದೆಗಳನ್ನು ಮುಂದುವರೆಸುವ ಅವಶ್ಯಕತೆ ಇರುತ್ತದೆ. ಮುಂದುವರೆದು, ಇನ್ನು 23760-00 ಎಕರೆ ಜಮೀನನ್ನು ಒತ್ತುವರಿಯಿಂದ ತೆರವುಗೊಳಿಸಲು ಬಾಕಿ ಇದ್ದು, ಈ ಜಮೀನುಗಳನ್ನು ಒತ್ತುವರಿಯಿಂದ ತೆರವುಗೊಳಿಸಲು, ತೆರವುಗೊಳಿಸಿದ ಜಮೀನುಗಳನ್ನು ಹರಾಜು ಮಾಡಬೇಕಾಗಿರುವುದರಿಂದ ಈಗಾಗಲೇ ಸೃಜಿಸಿರುವ ಹುದ್ದೆಗಳನ್ನು ಇನ್ನು 2 ವರ್ಷಕ್ಕೆ ಮುಂದುವರೆಸಿ ಆದೇಶಿಸಲು ಕೋರಲಾಗಿತ್ತು.

ಮೇಲೆ ಓದಲಾದ ಕ್ರ.ಸಂ.(4) ದಿನಾಂಕ : 23-03-2009ರ ಆದೇಶದಲ್ಲಿ ಸರ್ಕಾರವು 1 ವರ್ಷದವರೆಗೆ ಹುದ್ದೆಗಳನ್ನು ಮುಂದುವರೆಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (5)ರ ದಿನಾಂಕ : 01-06-2010ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಇವರು ಈಗಾಗಲೇ ಸೃಜಿಸಿರುವ ಹುದ್ದೆಗಳು ದಿನಾಂಕ : 02-02-2010ಕ್ಕೆ ಮತ್ತು ರೀಡಿಪ್ಲಾಯ್‌ಮೆಂಟ್ ಹುದ್ದೆಗಳು ದಿನಾಂಕ : 28-01-2010ಕ್ಕೆ ಅವಧಿ ಮುಗಿಯುತ್ತದೆ. ಈ ಹುದ್ದೆಗಳನ್ನು ಮುಂದುವರೆಸಿ ಆದೇಶಿಸಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಕೋರಿರುವಂತೆ, ಇನ್ನೂ 2 ವರ್ಷಕ್ಕೆ ಹುದ್ದೆಗಳನ್ನು ಮುಂದುವರೆಸಬೇಕಾಗಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 112 ಎಎಸ್‌ಡಿ 2010, ಬೆಂಗಳೂರು, ದಿನಾಂಕ : 29ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಲ್ಲಿನ ಸರ್ಕಾರಿ ಜಮೀನುಗಳ ಅತಿಕ್ರಮಣ ಮತ್ತು ಒತ್ತುವರಿ ಪತ್ತೆಹಚ್ಚಿ ಭೂ ಕಬಳಿಕೆ ವಿರುದ್ಧ ಕ್ರಮ ಜರುಗಿಸಲು ಹಾಗೂ ತೆರವುಗೊಳಿಸಿದ ಜಮೀನುಗಳನ್ನು ಹರಾಜು ಮಾಡಲು ಅನಧಿಕೃತ ಕಟ್ಟಡ ನಿರ್ಮಾಣ ತಡೆಕೋಶ (ಎನ್‌ಫೋರ್ಸ್‌ಮೆಂಟ್ ಸೆಲ್), ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಇಲ್ಲಿಗೆ ಈ ಕೆಳಕಂಡಂತೆ ಎರಡು ವರ್ಷದವರೆಗೆ ಹುದ್ದೆಗಳನ್ನು ಮುಂದುವರೆಸಿ ಆದೇಶಿಸಲಾಗಿದೆ.

1) ತಾತ್ಕಾಲಿಕವಾಗಿ ಸೃಜಿಸಲಾಗಿರುವ – ದಿನಾಂಕ : 03-02-2010 ರಿಂದ 02-02-2012 ರವರೆಗೆ

| | |
|---|---|
| ತಹಶೀಲ್ದಾರ್ | 2 ಹುದ್ದೆಗಳು |
| ಶಿರಸ್ತೇದಾರ್/ ಮ್ಯಾನೇಜರ್ | 2 ಹುದ್ದೆಗಳು |

2) ರಿ-ಡಿಪ್ಲಾಯ್‌ಮೆಂಟ್‌ನಲ್ಲಿ ಕಾರ್ಯ ನಿರ್ವಹಿಸುತ್ತಿರುವ -29-01-2010 ರಿಂದ 28-01-2012ರವರೆಗೆ

| | |
|---|---|
| ಸಹಾಯಕ ಅಯುಕ್ತರು | 2 ಹುದ್ದೆಗಳು |
| ಶಿರಸ್ತೇದಾರ್ | 5 ಹುದ್ದೆಗಳು |
| ಪ್ರಥಮ ದರ್ಜೆ ಸಹಾಯಕರು | 7 ಹುದ್ದೆಗಳು |
| ದ್ವಿತೀಯ ದರ್ಜೆ ಸಹಾಯಕರು | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಅದೇಶ ಸಂ : ಎಫ್‌ಡಿ 01 ಟಿಎಫ್‌ಪಿ 96, ದಿನಾಂಕ : 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ನೀಡಿದ ಆಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

1005 ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** 1999ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂ : ಕಂಇ 241 ಎಎಸ್‌ಡಿ 2005(1), ದಿನಾಂಕ : 25–01–2006.
2. ಸರ್ಕಾರದ ಅಧಿಕೃತ ಜ್ಞಾಪನ ಸಂ : ಆರ್‌ಡಿ 241 ಎಎಸ್‌ಡಿ 2005, ದಿನಾಂಕ : 07–04–2006.
3. ಸರ್ಕಾರದ ಆದೇಶ ಸಂ : ಆರ್‌ಡಿ 15 ಎಎಸ್‌ಡಿ 2008, ದಿನಾಂಕ : 25–07–2008, 04–09–2008, 30–10–2008 ಮತ್ತು 12–02–2009.
4. ಸರ್ಕಾರದ ಆದೇಶ ಸಂ : ಆರ್‌ಡಿ 15 ಎಎಸ್‌ಡಿ 2008 (ಭಾಗ), ದಿನಾಂಕ : 25–02–2009.
5. ಶ್ರೀಮತಿ ಎಸ್. ಎಂ. ಮಂಗಳ, ಇವರ ದಿನಾಂಕ : 09–07–2009 ರ ಮನವಿ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ.(1) ದಿನಾಂಕ: 25–01–2006ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಅಯೋಗದಿಂದ ಆಯ್ಕೆಗೊಂಡ ಒಟ್ಟು 78 ಅಭ್ಯರ್ಥಿಗಳನ್ನು ಪರಿವೀಕ್ಷಣಾ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 78 ಪರಿವೀಕ್ಷಣಾ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ ಎಲ್ಲಾ 78 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2) ದಿನಾಂಕ : 07–04–2006ರಲ್ಲಿ ಎಲ್ಲಾ ಪರಿವೀಕ್ಷಣಾ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಮೇಲೆ ಓದಲಾದ ಕ್ರ.ಸಂ. (3), ದಿನಾಂಕ : 25–07–2008ರಲ್ಲಿ, ದಿನಾಂಕ : 04–09–2008ರಲ್ಲಿ 30–10–2008 ರಲ್ಲಿ ಮತ್ತು ದಿನಾಂಕ : 12–02–2009ರಲ್ಲಿ ಕ್ರಮವಾಗಿ ಒಟ್ಟು 55, 10, 02 ಮತ್ತು 01 ಪರಿವೀಕ್ಷಣಾ ತಹಶೀಲ್ದಾರರುಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಲಾಗಿತ್ತು. ಮೇಲೆ ಓದಲಾದ ಕ್ರ.ಸಂ. (4) ದಿನಾಂಕ : 25–02–2009 ರಲ್ಲಿ ಶ್ರೀಮತಿ ಎಸ್. ಎಂ. ಮಂಗಳ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮ (ಪ್ರೊಬೇಷನರಿ) 1977 ರ ನಿಯಮ 4(i) (ii) ರ ಪ್ರಕಾರ ಒಂದು ವರ್ಷಗಳವರೆಗೆ ಪರಿವೀಕ್ಷಣಾ ಅವಧಿಯನ್ನು ಒಂದು ವರ್ಷದವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು. ಮೇಲೆ ಓದಲಾದ ಕ್ರ.ಸಂ. (5)ರ ದಿನಾಂಕ : 09–02–2009ರಲ್ಲಿ ಶ್ರೀ ಎಸ್. ಎಂ. ಮಂಗಳರವರು ಖಾಯಂ ಪೂರ್ವ ಅವಧಿ ಘೋಷಿಸುವಂತೆ ಮನವಿ ಮಾಡಿಕೊಂಡಿರುತ್ತಾರೆ. ಮುಂದುವರೆದು, ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರು ತಮ್ಮ ವ್ಯಾಪ್ತಿಯಲ್ಲಿರುವ ಶ್ರೀಮತಿ ಎಸ್.ಎಂ. ಮಂಗಳ, ಪರಿವೀಕ್ಷಣಾ ತಹಶೀಲ್ದಾರರ ಬಗ್ಗೆ ನಿಗದಿತ ಇಲಾಖಾ ಪರಿಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುವುದಾಗಿ ಹಾಗೂ ಪರಿವೀಕ್ಷಣಾ ತಹಶೀಲ್ದಾರ್ ಇವರು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯಲ್ಲಿ ಕಾರ್ಯ ನಿರ್ವಹಿಸಿರುತ್ತಾರೆ ಎಂದು ವರದಿ ಮಾಡಿರುವ ಹಿನ್ನೆಲೆಯಲ್ಲಿ ಇವರಿಗೆ ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ)ನಿಯಮಗಳು 1977ರ ನಿಯಮ 5(1) ರನ್ವಯ ಈ ಕೆಳಕಂಡ ಪರಿವೀಕ್ಷಣಾ ತಹಶೀಲ್ದಾರ್ ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ಆರ್‌ಡಿ 15 ಎಎಸ್‌ಡಿ 2008, ಬೆಂಗಳೂರು, ದಿನಾಂಕ : 22ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ ಪರಿವೀಕ್ಷಣಾ ತಹಶೀಲ್ದಾರರನ್ನು ಸರ್ಕಾರದ ಅದೇಶ ಸಂ : ಆರ್‌ಡಿ 15 ಎಎಸ್‌ಡಿ 2008 (ಭಾಗ), ದಿನಾಂಕ : 25-02-2009ರಲ್ಲಿ ಕರ್ನಾಟಕ ನಾಗರೀಕ ಸೇವಾ (ಪ್ರೋಬೇಷನ್) 1977ರ ನಿಯಮ 4 (i) (ii) ರ ಪ್ರಕಾರ ಒಂದು ವರ್ಷದವರೆಗೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

| ಕ್ರ.ಸಂ. | ಪರವೀಕ್ಷಣಾ ತಹಶೀಲ್ದಾರರ ಹೆಸರು (ಶ್ರೀ/ಶ್ರೀಮತಿ) | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಎಸ್. ಎಂ. ಮಂಗಳ | 27-01-2006 | 26-01-2009 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು-3)

1006

**ಕಂದಾಯ ಸಚಿವಾಲಯ**

**ವಿಷಯ :** ಬಳ್ಳಾರಿ ನಗರದ ಎರಡನೇ ಹಂತದ ವರ್ತುಲ ರಸ್ತೆ ನಿರ್ಮಾಣಕ್ಕಾಗಿ ಬೆಳಗಲ್ಲು ಕೊಳಗಲ್ಲು ಆಲದಹಳ್ಳಿ ಬಳ್ಳಾರಿ ಮತ್ತು ಮುಂಡರಗಿ ಗ್ರಾಮಗಳ ಪಟ್ಟಾದಾರರು ಬಿಟ್ಟುಕೊಡುವ ಜಮೀನಿನ ಉಳಿದ ವಿಸ್ತೀರ್ಣವನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಭೂಪರಿವರ್ತನೆಗೊಳಿಸಿಕೊಳ್ಳಲು ಭೂ ಪರಿವರ್ತನಾ ಶುಲ್ಕದಿಂದ ವಿನಾಯ್ತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ : 31 ಎಲ್‌ಜಿಇ : 2009, ದಿನಾಂಕ : 30-12-2009.
2. ಜಿಲ್ಲಾಧಿಕಾರಿಗಳು ಬಳ್ಳಾರಿ ರವರ ಪತ್ರ ಸಂಖ್ಯೆ : ಸಂ:ಕಂ:ಭೂಪ:85:2009-10/ಬಳ್ಳಾರಿ ವರ್ತುಲ ರಸ್ತೆ ದಿನಾಂಕ : 23-1-2010

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಸಚಿವ ಸಂಪುಟದ ಅನುಮೋದನೆ ಪಡೆದು ಬಳ್ಳಾರಿ ನಗರದ ಮೊದಲನೇ ಹಂತದ ವರ್ತುಲ ರಸ್ತೆ ನಿರ್ಮಾಣಕ್ಕಾಗಿ ಆಂದ್ರಾಳು, ಮುಂಡರಗಿ, ಪಿ. ಬೂದಿಹಾಳು ಮತ್ತು ಬಿ.ಗೋನಾಳು ಗ್ರಾಮಗಳ ಪಟ್ಟಾದಾರರು ಉಚಿತವಾಗಿ ಬಿಟ್ಟುಕೊಟ್ಟಿರುವ ಒಟ್ಟು ವಿಸ್ತೀರ್ಣ 38.48 ಎಕರೆಗೆ ಯಾವುದೇ ರೀತಿಯ ಪರಿಹಾರವನ್ನು ಭವಿಷ್ಯದಲ್ಲಿ ಕ್ಲೇಮ್ ಮಾಡಬಾರದೆಂಬ ಷರತ್ತಿಗೊಳಪಟ್ಟು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 108ನ್ನು ಸಡಿಲಿಸಿ ಪಟ್ಟಾದಾರರ ಉಳಿಕೆ 131.27 ಎಕರೆ ಜಮೀನಿಗೆ ವಸತಿಯೇತರ ಭೂ ಪರಿವರ್ತನಾ ಶುಲ್ಕ ರೂ. 1,51,09,963 (ರೂ. ಒಂದುಕೋಟಿ ಐವತ್ತೊಂದು ಲಕ್ಷದ ಒಂಬತ್ತುಸಾವಿರ ಒಂಬೈನೂರ ಅರವತ್ತೂರು ಮಾತ್ರ) ಪಾವತಿಸುವಿಕೆಯಿಂದ ವಿನಾಯ್ತಿ ನೀಡಿ ಆದೇಶಿಸಲಾಗಿರುತ್ತದೆ.

ಜಿಲ್ಲಾಧಿಕಾರಿಗಳು ಬಳ್ಳಾರಿ ರವರು ಮೇಲೆ ಓದಲಾದ (2)ರ ದಿನಾಂಕ ; 23-01-2010ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರ ಬಳ್ಳಾರಿರವರು ಬಳ್ಳಾರಿ ನಗರದ ಎರಡನೇ ಹಂತದ ವರ್ತುಲ ರಸ್ತೆ ನಿರ್ಮಾಣಕ್ಕಾಗಿ ಬೆಳಗಲ್ಲು ಕೊಳಗಲ್ಲು ಆಲದಹಳ್ಳಿ ಬಳ್ಳಾರಿ ಮತ್ತು ಮುಂಡರಗಿ ಗ್ರಾಮಗಳ ಪಟ್ಟಾದಾರರು ಉಚಿತವಾಗಿ ಬಿಟ್ಟುಕೊಡುವ ಜಮೀನಿನ ಉಳಿದ ವಿಸ್ತೀರ್ಣವನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಭೂ ಪರಿವರ್ತನೆಗೊಳಿಸಿಕೊಳ್ಳಲು ಸಹ ಭೂ ಪರಿವರ್ತನಾ ಶುಲ್ಕದಿಂದ ವಿನಾಯ್ತಿ ನೀಡಲು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆಂದು ವರದಿ ಮಾಡಿದ್ದಾರೆ. ಮುಂದುವರಿದು ಬಳ್ಳಾರಿ ಎರಡನೇ ಹಂತದ ವರ್ತುಲ ರಸ್ತೆಗೆ, ಸರ್ಕಾರಕ್ಕೆ ಉಚಿತವಾಗಿ ಬಿಟ್ಟುಕೊಟ್ಟಿರುವ ಜಮೀನುಗಳ ವಿವರ ಭೂ ಪರಿವರ್ತನೆಗೆ ಕೋರಿರುವ ವಿಸ್ತೀರ್ಣ, ಸರ್ಕಾರಕ್ಕೆ ಬಿಟ್ಟುಕೊಟ್ಟ ಜಮೀನಿನ ಮಾರ್ಗಸೂಚಿ ದರ ಮತ್ತು ಪ್ರಚಲಿತ ಮಾರುಕಟ್ಟೆ ದರ ಹಾಗೂ ಭೂ ಪರಿವರ್ತನಾ ಶುಲ್ಕ ಮನ್ನಾ ಮಾಡಲು ಪರಿಗಣಿಸಬೇಕಾಗಿರುವ ಮೊತ್ತ ಇವುಗಳ ವಿವರಗಳನ್ನು ಈ ಕೆಳಕಂಡಂತೆ ನೀಡಿದ್ದಾರೆ.

ಎರಡನೇ ಹಂತದ ಬಳ್ಳಾರಿ ವರ್ತುಲ ರಸ್ತೆಗೆ ಸರ್ಕಾರಕ್ಕೆ ಉಚಿತವಾಗಿ ಜಮೀನು ಬಿಟ್ಟುಕೊಟ್ಟ ಮಾಹಿತಿ ಮತ್ತು ಇತರೆ ಮಾಹಿತಿ ಜಮೀನಿನ ವಿವರ

| ಕ್ರ. ಸ | ಗ್ರಾಮದ ಹೆಸರು | ಪಟ್ಟಾ ದಾರರ ಸಂಖ್ಯೆ | ಒಟ್ಟು ವಿಸ್ತೀರ್ಣ ಎಕರೆ ಗಳಲ್ಲಿ | ವರ್ತುಲ ರಸ್ತೆಗೆ ಉಚಿತ ವಾಗಿ ಜಮೀನು ಬಿಟ್ಟು ಕೊಟ್ಟ ವಿಸ್ತೀರ್ಣ | ಉಳಿದ/ ಭೂಪರಿ ವರ್ತನೆಗೆ ಕೋರ ಬಹುದಾದ ವಿಸ್ತೀರ್ಣ | ಸರ್ಕಾರಕ್ಕೆ ಬಿಟ್ಟುಕೊಟ್ಟ ಜಮೀನು | | ಭೂ ಪರಿವರ್ತನೆ ಶುಲ್ಕ ರೂ. | |
|---|---|---|---|---|---|---|---|---|---|
| | | | | | | ಮಾರ್ಗ ಸೂಚಿ ಬೆಲೆ | ಪ್ರಚಲಿತ ಮಾರುಕಟ್ಟೆ ಬೆಲೆ | ವಸತಿ | ವಸತಿಯೇತರ |
| 1 | 2 | 3 | 4 | 5 | 6 | 7 | 8 | 9 | 10 |
| 1 | ಬೆಳಗಲ್ಲು | 74 | 372.20 | 41.50 | 514.46 | 3112500.00 | 51045388.00 | 16806050.00 | 33612100.00 |
| 2 | ಕೊಳಗಲ್ಲು | 6 | 27.00 | 2.82 | 34.74 | 1269000.00 | 3525000.00 | 1134864.00 | 2269728.00 |
| 3 | ಆಲದಹಳ್ಳಿ | 23 | 127.81 | 13.41 | 174.45 | 1005750.00 | 8046000.00 | 5698821.00 | 11397641.00 |
| 4 | ಬಳ್ಳಾರಿ | 25 | 47.23 | 8.73 | 144.45 | 3492000.00 | 13095000.00 | 4718800.00 | 9437600.00 |
| 5 | ಮುಂಡರಗಿ | 8 | 15.91 | 3.21 | 52.70 | 963000.00 | 3210000.00 | 1721570.00 | 3443140.00 |
| | ಒಟ್ಟು | 136 | 590.15 | 69.67 | 920.8 | 9842250.00 | 78921388.00 | 30080105.00 | 60160209.00 |

ಜಮೀನುಗಳ ಪಟ್ಟಾದಾರರು ಒಟ್ಟು 69.67 ಎಕರೆ ಜಮೀನನ್ನು ಎರಡನೇ ಹಂತದ ಬಳ್ಳಾರಿ ವರ್ತುಲ ರಸ್ತೆಗಾಗಿ ಸರ್ಕಾರಕ್ಕೆ ಬಿಟ್ಟುಕೊಟ್ಟಿರುತ್ತಾರೆ. ಇದರ ಮೌಲ್ಯ ಪ್ರಚಲಿತ ಮಾರುಕಟ್ಟೆ ದರ ರೂ. 7,89,21,388–00 ಆಗಿದ್ದು ಉಳಿಕೆ ಜಮೀನು 920.08 ಎ/ಗು ಆಗಿರುತ್ತದೆ ಒಡಂಬಡಿಕೆಯಂತೆ ಭೂ ಪರಿವರ್ತನೆಗೊಳಿಸಲು ಶುಲ್ಕ ವಿನಾಯ್ತಿ ನೀಡಲು ಪ್ರಸ್ತಾವನೆ ಸಲ್ಲಿಸಲಾಗಿದ್ದು ಇದಕ್ಕೆ ಪ್ರಚಲಿತ ವಸತಿಯೇತರ ಭೂ ಪರಿವರ್ತನಾ ದರದಂತೆ ಒಟ್ಟು ರೂ. 6,01,60,209–00ಗಳ ವಿನಾಯ್ತಿ ನೀಡಬೇಕಾಗುತ್ತದೆ.

ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 108ರನ್ವಯ ಕೆಲವು ಪ್ರಕರಣಗಳಲ್ಲಿ ಭೂ ಪರಿವರ್ತನಾ ಶುಲ್ಕ ಪಾವತಿಸುವಿಕೆಯಿಂದ ವಿನಾಯ್ತಿ ನೀಡಲು ಅವಕಾಶ ಕಲ್ಪಿಸಲಾಗಿರುತ್ತದೆ. ಆದರೆ ಈ ಪ್ರಕರಣವು ನಿಯಮ 108ರಲ್ಲಿ ಅವಕಾಶ ಕಲ್ಪಿಸಿರುವ ಪ್ರಕರಣಗಳಲ್ಲಿ ಒಂದಾಗಿರುವುದಿಲ್ಲ. ಆದರೆ ಬಳ್ಳಾರಿ ವರ್ತುಲ ರಸ್ತೆ ನಿರ್ಮಾಣವು ಒಂದು ಸಾರ್ವಜನಿಕ ಉದ್ದೇಶವನ್ನೊಳಗೊಂಡಿದ್ದು ವರ್ತುಲ ರಸ್ತೆ ನಿರ್ಮಾಣಕ್ಕಾಗಿ ಅಲ್ಲಿನ ಪಟ್ಟಾದಾರರು ತಮ್ಮ ಜಮೀನನ್ನು ಉಚಿತವಾಗಿ ಬಿಟ್ಟುಕೊಡುವುದಕ್ಕೆ ಒಪ್ಪಿಗೆ ನೀಡಿರುವುದರಿಂದ ಸರ್ಕಾರಕ್ಕೆ ಹೆಚ್ಚಿನ ಆರ್ಥಿಕ ಹೊರೆಬೀಳುವ ಸಾಧ್ಯತೆ ಇರುವುದಿಲ್ಲ.

ಆದ್ದರಿಂದ ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ಆರ್‌ಡಿ :8: ಎಲ್‌ಜಿಇ : 2010, ಬೆಂಗಳೂರು, ದಿನಾಂಕ : 5ನೇ ಏಪ್ರಿಲ್ 2010**

ಬಳ್ಳಾರಿ ನಗರ ಎರಡನೇ ಹಂತದ ವರ್ತುಲ ರಸ್ತೆ ನಿರ್ಮಾಣಕ್ಕಾಗಿ ಬೆಳಗಲ್ಲು ಕೊಳಗಲ್ಲು, ಆಲದಹಳ್ಳಿ, ಬಳ್ಳಾರಿ, ಮತ್ತು ಮುಂಡರಗಿ ಗ್ರಾಮಗಳ ಪಟ್ಟಾದಾರರು ಉಚಿತವಾಗಿ ಬಿಟ್ಟುಕೊಟ್ಟಿರುವ ಒಟ್ಟು ವಿಸ್ತೀರ್ಣ 69.67 ಎಕರೆಗೆ ಯಾವುದೇ ರೀತಿಯ ಪರಿಹಾರವನ್ನು ಭವಿಷ್ಯದಲ್ಲಿ ಕ್ಲೇಮ್ ಮಾಡಬಾರದೆಂಬ ಷರತ್ತಿಗೊಳಪಟ್ಟು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 108ನ್ನು ಸಡಿಲಿಸಿ ಪಟ್ಟಾದಾರರ ಉಳಿಕೆ ಜಮೀನು 920.08 ಎಕರೆ ಜಮೀನಿಗೆ ವಸತಿಯೇತರ ಭೂ ಪರಿವರ್ತನಾ ಶುಲ್ಕ ರೂ. 6,01,60,209–00 (ಆರುಕೋಟಿ ಒಂದುಲಕ್ಷ ಅರವತ್ತುಸಾವಿರದ ಇನ್ನೂರ ಒಂಬತ್ತು ಮಾತ್ರ) ರೂಪಾಯಿಗಳ ಪಾವತಿಸುವಿಕೆಯಿಂದ ವಿನಾಯ್ತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ : ಆಇ: 1116: ವೆಚ್ಚ –7:2010 ದಿನಾಂಕ : 19–03–2010ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಜೆ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

1007 ಕಂದಾಯ ಇಲಾಖೆ (ಭೂ ಮಂಜೂರಾತಿ–3)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಕೆ.ಕೇಶವರಾಜು, ಹಿಂದಿನ ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇವರನ್ನು ಅಮಾನತ್ತಿನಿಂದ ತೆರವುಗೊಳಿಸಿ ಸೇವೆಗೆ ಮರು ನೇಮಕಾತಿ ಮಾಡುವ ಬಗ್ಗೆ.

**ಓದಲಾಗಿದೆ :** 1. ಶಿವಮೊಗ್ಗ ಜಿಲ್ಲಾಧಿಕಾರಿಗಳ ಅ.ಸ.ಪತ್ರ ಸಂ : ಇಎಸ್‌ಟಿ(1), ಸಿಆರ್–42/2009–10, ದಿನಾಂಕ : 07–05–2009.

2. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 05 ಎಡಿಇ 2009, ದಿನಾಂಕ : 27–05–2009.

3. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 08 ಎಡಿಇ 2009, ದಿನಾಂಕ : 16–02–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 07–05–2009ರ ಅ.ಸ. ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ತೀರ್ಥಹಳ್ಳಿ ತಾಲ್ಲೂಕಿನಲ್ಲಿ ಅನಧಿಕೃತ ಮರಳು ಸಾಗಾಣಿಕೆಗೆ ಸಂಬಂಧಿಸಿದಂತೆ, ತನಿಖಾಧಿಕಾರಿಗಳು ಹಾಗೂ ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಇವರ ದಿನಾಂಕ : 07–05–2009ರ ಪ್ರಥಮ ಮಾಹಿತಿ ವರದಿಯಲ್ಲಿ ಶ್ರೀ ಕೆ. ಕೇಶವರಾಜು, ತಾಲ್ಲೂಕು ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇವರನ್ನು ದಿನಾಂಕ : 07–05–2009ರಂದು ಲೋಕಾಯುಕ್ತ ಪ್ರಕರಣದಲ್ಲಿ ದಸ್ತಗಿರಿ ಮಾಡಿ ಲಂಚ ನಿರೋಧಕ ಕಾಯ್ದೆ 1988ರ ಕಲಂ 7(13)(1)(ಡಿ) ರಡಿ 13(2)ರ ಜೊತೆಯಲ್ಲಿ ಕ್ರೈಂ ಸಂ : 5/2009ರ ಪ್ರಕರಣವನ್ನು ದಾಖಲಿಸಿರುವುದಾಗಿ ವರದಿ ಮಾಡುತ್ತಾ ಸದರಿಯವರನ್ನು ಶಿವಮೊಗ್ಗ ಜಿಲ್ಲಾ ಘನ ವಿಶೇಷ ಹಾಗೂ ಪ್ರಧಾನ ಸತ್ರ ನ್ಯಾಯಾಲಯದಲ್ಲಿ ಹಾಜರುಪಡಿಸಲಾಗುವುದೆಂದು ತಿಳಿಸಿರುತ್ತಾರೆ. ಆದ್ದರಿಂದ ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಪೊಲೀಸ್ ಠಾಣೆಯ ತನಿಖಾಧಿಕಾರಿ ಮತ್ತು ಪೊಲೀಸ್ ಇನ್ಸ್‌ಪೆಕ್ಟರ್ ಇವರು ದಿನಾಂಕ : 07–05–2009ರಂದು ವರದಿ ಮಾಡಿದಂತೆ, ಶ್ರೀ ಕೆ. ಕೇಶವರಾಜು, ತಹಶೀಲ್ದಾರ್, ತೀರ್ಥಹಳ್ಳಿ ಇವರು ಈ ಪ್ರಕರಣದಲ್ಲಿ ಕ್ರಿಮಿನಲ್ ಮೊಕದ್ದಮೆಗೆ ಗುರಿಯಾಗಿರುವ ಕಾರಣ, ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಎ) ರನ್ವಯ ಸೇವೆಯಿಂದ ಅಮಾನತ್ತುಗೊಳಿಸುವಂತೆ ಕೋರಿ, ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಎ)ರನ್ವಯ ಸೇವೆಯಿಂದ ಅಮಾನತ್ತುಗೊಳಿಸಿ ಮೇಲೆ ಓದಲಾದ ಕ್ರ.ಸಂ.(2)ರ ಸರ್ಕಾರವು ಆದೇಶ ಹೊರಡಿಸಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (3)ರಲ್ಲಿ ಸದರಿ ಅಧಿಕಾರಿಯ ವಿರುದ್ಧ ಗುನ್ನೆ ಸಂಖ್ಯೆ : 05/2009ರಲ್ಲಿ ಆರಕ್ಷಕ ನಿರೀಕ್ಷಕರು, ಶಿವಮೊಗ್ಗ, ಕರ್ನಾಟಕ ಲೋಕಾಯುಕ್ತ, ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ–2,3) ಮಾನ್ಯ ಅಪರ ಪೊಲೀಸ್ ಮಹಾನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರದ ದಿನಾಂಕ : 01–09–2009 (ಉಲ್ಲೇಖ–1)ರೊಡನೆ ಕಳುಹಿಸುತ್ತಾ ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿವಾರಣಾ ಅಧಿನಿಯಮ 1988ರ 19ನೆಯ ಕಲಂ (1)ರಡಿಯಲ್ಲಿ ಮಂಜೂರಾತಿಗಾಗಿ ಕೋರಿರುತ್ತಾರೆ. ಸರ್ಕಾರವು ಲೋಕಾಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಹಾಗೂ ಐ.ಪಿ.ಸಿ. ಕಲಂ 409, 468ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಐಪಿಸಿ ಕಾಯ್ದೆ 19(1)(ಸಿ) ಹಾಗೂ ಕಲಂ 197 ಸಿಆರ್‌ಪಿಸಿ ಅಡಿಯಲ್ಲಿ ಮಂಜೂರಾತಿ ನೀಡಲಾಗಿದೆ.

ಸದರಿ ಪ್ರಕರಣವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಸದರಿ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ/ಕ್ರಿಮಿನಲ್ ಮೊಕದ್ದಮೆ ಬಾಕಿಯಿರಿಸಿ, ಅಮಾನತ್ತಿನಿಂದ ತೆರವುಗೊಳಿಸಿ, ಸೇವೆಗೆ ಪುನರ್ ನೇಮಕ ಮಾಡಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 08 ಎಡಿಇ 2009, ಬೆಂಗಳೂರು, ದಿನಾಂಕ : 03–04–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಕೆ. ಕೇಶವರಾಜು, (ಹಿಂದಿನ ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ) ಪ್ರಸ್ತುತ ಅಮಾನತ್ತಿನಲ್ಲಿರುವ ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 10(5)(ಸಿ)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಇವರ ವಿರುದ್ಧದ ಶಿಸ್ತು ಕ್ರಮ ಬಾಕಿ ಇರಿಸಿ, ಸರ್ಕಾರವು ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಿಂದ ತೆರವುಗೊಳಿಸಿ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಉಡುಪಿ ಇಲ್ಲಿ ಖಾಲಿ ಇರುವ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1008

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**DEPARTMENT OF PERSONNEL AND ADMINISTRATIVE SECRETARIAT**

**NO. DPAR 14, HGG 2010 BANGALORE, DATED : 31-03-2010.**

**ADDENDUM**

In the guidelines governing the extension of State Hospitality to the visiting dignitaries appended to the Government Order No. DPAR 554 HGG 2005, dt. 22-04-2006, under the head State Guests below the words Speaker & Deputy Speaker of the Legislative Assembly of other States appearing in Sl. No. 24 (b) at para 3 (a), the following may be figured.

24 (c) Chairman & Members of $13^{th}$ Finance Commission.
- (d) Central Study Team visiting for studying the draught and flood situation in Karnataka
- (e) Chairman of Krishna Water Dispute Tribunal
- (f) Chairman and members of Central Appellate Tribunal
- (g) Deputy Chief Minister of Other States
- (h) Chairperson, Central Social Welfare Board
- (i) Chairperson, National Commission for Protection of Child Rights
- (j) Chairperson, Competition Appellate Tribunal, New Delhi
- (k) Chairman, Central Empowered Committee
- (l) Chairman, Central Vigilance Commission
- (m) Chairman, Appellate Tribunal of Electricity, Ministry of Power, Government of India, New Delhi
- (n) Chairman, Vice-Chairman and Members of National Commission of Safai Karmachari's
- (o) Chairman and Members of UPSC
- (p) Non-officials having the equivalent rank of Union Cabinet Secretary or Union Cabinet Ministers
- (q) Lokayukta of Other States
- (r) Chairman, Central Electricity Authority, Government of India, New Delhi
- (s) Presiding Officer, Cyber Regulations Appellate Tribunal, Ministry of Communications & Information Technology, New Delhi
- (t) Chairperson, Armed Forces Tribunal, New Delhi

By Order and in the name of the Governor of Karnataka

**V.G. Diwakar**

PR NO. 1009

Joint Secretary to Government

D.P.A.R. (State Protocol)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀ ಈ. ರಾಮಕೃಷ್ಣಪ್ಪ, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ವಿರುದ್ಧ ಇಲಾಖಾ ವಿಚಾರಣೆ – ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 435 ಎಸ್ಇಎನ್ 2006, ದಿನಾಂಕ : 16–08–2007
2. ಪ್ರಾದೇಶಿಕ ಆಯುಕ್ತರು, ಬೆಂಗಳೂರು ಅವರ ಪತ್ರ ಸಂಖ್ಯೆ ಸಿಸಿಎ (ಎ) ಸಿಆರ್/53/2007–08, ದಿನಾಂಕ 6–11–2009
3. ನೋಟೀಸ್ ಸಂಖ್ಯೆ ಸಿಆಸುಇ 435 ಎಸ್ಇಎನ್ 2006 ದಿನಾಂಕ : 17–12–2009
4. ಈ. ರಾಮಕೃಷ್ಣಪ್ಪ, ಅಧೀನ ಕಾರ್ಯದರ್ಶಿ, ಇವರ ಉತ್ತರ ದಿನಾಂಕ 30–12–2009

**ಪ್ರಸ್ತಾವನೆ :**

ಕೋಲಾರ ಜಿಲ್ಲೆ, ಶ್ರೀನಿವಾಸಪುರ ತಾಲ್ಲೂಕು ತಹಸೀಲ್ದಾರರಾಗಿ ನಿಯೋಜನೆ ಮೇರೆಗೆ ಕಾರ್ಯ ನಿರ್ವಹಿಸುತ್ತಿದ್ದಾಗ 2004ರ ಮತದಾರರ ಪಟ್ಟಿಯ ವಿಶೇಷ ಸಂಕ್ಷಿಪ್ತ ಪರಿಷ್ಕರಣೆ ಕೈಗೊಳ್ಳುವಾಗ ಮತದಾರರ ನೋಂದಣಿ ನಿಯಮಗಳು 1960ರ ನಿಯಮ 18 ರಿಂದ 21–ಎ ವರೆಗಿನ ಕಾರ್ಯ ವಿಧಾನವನ್ನು ಅನುಸರಿಸದೇ ಉದ್ದೇಶಪೂರ್ವಕವಾಗಿ 835 ಹೆಸರುಗಳನ್ನು

ಮತದಾರರ ಪಟ್ಟಿಯಿಂದ ಕೈಬಿಟ್ಟು ದುರ್ನಡತೆ ಎಸಗಿದ ಆರೋಪಕ್ಕಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ 16–08–2007ರ ಸರ್ಕಾರಿ ಆದೇಶದಲ್ಲಿ ಶ್ರೀ ಈ. ರಾಮಕೃಷ್ಣಪ್ಪ, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಆದೇಶಿಸಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾ ಅಧಿಕಾರಿಯವರು ಮೇಲೆ (2)ರಲ್ಲಿ ಓದಲಾದ ದಿನಾಂಕ 06–11–2009ರ ವಿಚಾರಣಾ ವರದಿಯನ್ನು ಸಲ್ಲಿಸಿ ಆರೋಪ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು.

> "ಆರೋಪಿಯು ಒಟ್ಟಾಗಿ ಅರ್ಜಿಯನ್ನು ಸ್ವೀಕರಿಸಿರುವುದು ದಾಖಲೆಗಳಿಂದ ಮೂಡಿ ಬಂದಿದೆ. ಈ ರೀತಿ ಒಟ್ಟಾಗಿ ಅರ್ಜಿಗಳನ್ನು ಸ್ವೀಕರಿಸಲು ಇರುವ ಅವಕಾಶ ಕುರಿತು ಯಾವುದೇ ದಾಖಲೆಯನ್ನು ಹಾಜರುಪಡಿಸಿರುವುದಿಲ್ಲ, ಆರೋಪಿಯೇ ತಿಳಿಸುವಂತೆ ಶ್ರೀ ಟಿ.ಎಂ. ವೆಂಕಟಸ್ವಾಮಿ ಎಂಬುವವರು 22 ಅರ್ಜಿಗಳನ್ನು ಕೊಟ್ಟಿದ್ದಾರೆ. ಸದರಿ ಅರ್ಜಿಗಳನ್ನು ನಿರ್ದಿಷ್ಟಾಧಿಕಾರಿಯು ಸ್ವೀಕರಿಸಿದ ನಂತರ ಆರೋಪಿಯು ಆಕ್ಷೇಪಣೆ ಅರ್ಜಿಯನ್ನು ಅಂಗೀಕರಿಸಿದ್ದಾರೆ. ಆದರೆ ದಿನಾಂಕವನ್ನು ನಮೂದಿಸಿರುವುದಿಲ್ಲ, ಅನುಮೋದಿಸಿದ ದಿನಾಂಕ ಯಾವುದೆಂದು ತಿಳಿಯುವುದಿಲ್ಲ. ಮತದಾರರ ನೋಂದಣಾಧಿಕಾರಿಯಿಂದ ಪ್ರತಿ ಅರ್ಜಿಯ ತೀರ್ಮಾನಕ್ಕೆ ಅನುಮೋದನೆ ಪಡೆದಿರುವುದಿಲ್ಲ, ಮತದಾರ ನೋಂದಣಿ ನಿಯಮಗಳು 1960ರ ನಿಯಮ 19ರನ್ವಯ ಈ ರೀತಿ ಅನುಮೋದನೆ ಕಡ್ಡಾಯ, ಆರೋಪಿಯು ಗ್ರಾಮ ಲೆಕ್ಕಿಗರು ಮತ್ತು ರಾಜಸ್ವ ನಿರೀಕ್ಷಕರು ನೀಡಿರುವ ವರದಿಯನ್ನು ಆಧರಿಸಿ ಮತದಾರರ ಪಟ್ಟಿಯಿಂದ 835 ಹೆಸರುಗಳನ್ನು ತೆಗೆದುಹಾಕಿದ್ದಾರೆ. ಆಕ್ಷೇಪಣೆಗೆ ಒಳಪಟ್ಟ ಪ್ರತಿ ಅರ್ಜಿಯನ್ನು ಕ್ರಮಬದ್ಧವಾಗಿ ಗ್ರಾಮದಲ್ಲಿ ಪಂಚರ ಸಮಕ್ಷಮ ವಿಚಾರಣೆ ನಡೆಸಬೇಕಾಗಿತ್ತು ಅದನ್ನು ಮಾಡಿರುವುದಿಲ್ಲ ಆದ್ದರಿಂದ ಆರೋಪ ಸಾಬೀತಾಗಿದೆ".

ವಿಚಾರಣಾ ವರದಿಯ ಪ್ರತಿಯನ್ನು ಲಗತ್ತಿಸಿ ಶ್ರೀ ಈ. ರಾಮಕೃಷ್ಣಪ್ಪ, ಅಧೀನ ಕಾರ್ಯದರ್ಶಿ ಅವರಿಗೆ ಮೇಲೆ (3)ರಲ್ಲಿ ಓದಲಾದ ದಿನಾಂಕ 17–12–2009ರ ನೋಟೀಸ್ ನೀಡಿ ವಿಚಾರಣಾ ವರದಿಯ ಕುರಿತು ಅಹವಾಲು ಏನಾದರೂ ಇದ್ದಲ್ಲಿ, ಅದನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಆರೋಪಿ ಅಧಿಕಾರಿಯು ಮೇಲೆ (4)ರಲ್ಲಿ ಓದಲಾದ ದಿನಾಂಕ 30–12–2009ರ ಉತ್ತರ ನೀಡಿ "ಸಾಕ್ಷಿಗಳ ನಿರ್ಧಾರಣ" *(Assessment of Evidence)* ಇಲ್ಲದೇ ವಿಚಾರಣಾ ವರದಿಯನ್ನು ಸಲ್ಲಿಸಲಾಗಿದೆ ಎಂದು ತಿಳಿಸಿದ್ದಾರೆ. ಆದರೆ ವಿಚಾರಣಾಧಿಕಾರಿಯು ಸಾಕ್ಷ್ಯವನ್ನು ಪರಾಮರ್ಶಿಸಿದ ನಂತರವೇ ನಿರ್ಣಯಕ್ಕೆ ಬಂದಿದ್ದಾರೆ. ಆದ್ದರಿಂದ ಆರೋಪಿ ಅಧಿಕಾರಿಯ ವಾದ ಸರಿಯಲ್ಲ. ಆರೋಪಿಯು ಪ್ರತಿಪಾದಿಸುವಂತೆ ಜಿಲ್ಲಾಧಿಕಾರಿಗಳು ಆರೋಪಿಯ ಕ್ರಮದಲ್ಲಿ "ದುರುದ್ದೇಶ" *(malafide)* ಇಲ್ಲವೆಂದು ತಿಳಿಸಿದ್ದಾರೆ ಹಾಗೂ ಆರೋಪಿಯ ಕ್ರಮವನ್ನು "ನಿಯಮಕ ವೈಫಲ್ಯ" *(procedural lapse)* ಎಂದು ಬಣ್ಣಿಸಿದ್ದಾರೆ. ಮತದಾರ ನೋಂದಣಿ ಅಧಿಕಾರಿಯಾದ ಉಪ ವಿಭಾಗಾಧಿಕಾರಿಯವರು ನೀಡಿದ ಅಧಿಕಾರದ ಮೇರೆಗೆ ತಾವು ಕ್ರಮ ಕೈಗೊಂಡಿರುವುದಾಗಿ ಆರೋಪಿಯು ತಿಳಿಸಿ ತನ್ನ ಆದೇಶವನ್ನು ಮೇಲಾಧಿಕಾರಿಗಳು ರದ್ದುಪಡಿಸಿರುವುದಿಲ್ಲವಾದ ಕಾರಣ ಅವು ಜಾರಿಯಲ್ಲಿವೆ ಎಂದು ತಿಳಿಸಿ ತಮ್ಮನ್ನು ಆರೋಪಮುಕ್ತರನ್ನಾಗಿಸಲು ಕೋರಿದ್ದಾರೆ.

ಆರೋಪಿಯ ಉತ್ತರದಿಂದಾಗಿ ಪ್ರಕರಣದ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿದೆ. ಆಕ್ಷೇಪಣೆಗಳನ್ನು ಒಟ್ಟಾಗಿ ಸ್ವೀಕರಿಸಲು ಅವಕಾಶ ಕಲ್ಪಿಸಿರುವ ಕುರಿತು ಆರೋಪಿಯು ಚುನಾವಣಾ ಆಯೋಗದಿಂದ ನೀಡಲ್ಪಟ್ಟ ಪತ್ರವನ್ನು ಒದಗಿಸಿದ್ದಾರೆ. ಅದನ್ನು ಒಪ್ಪಲಾಗಿದೆ. ಆರೋಪಿಗೆ ಮತದಾರರ ಪಟ್ಟಿ ಪರಿಷ್ಕರಣೆ ಸಂಬಂಧ ಉಪವಿಭಾಗಾಧಿಕಾರಿಯವರು ಅಧಿಕಾರ ನೀಡಿದ್ದಾರೆಂಬುದಕ್ಕೆ ಯಾವುದೇ ದಾಖಲೆಯೂ ಇಲ್ಲ. ಆದರೆ ಆರೋಪಿಯ ಆದೇಶವನ್ನು ಉಪ ವಿಭಾಗಾಧಿಕಾರಿ ಆಗಲೀ, ಜಿಲ್ಲಾಧಿಕಾರಿಯಾಗಲೀ ರದ್ದುಪಡಿಸಿರುವುದಿಲ್ಲ. ಆರೋಪಿಯ ಕ್ರಮ *malafide* ಅಲ್ಲ *procedural lapse* ಎಂದು ಜಿಲ್ಲಾಧಿಕಾರಿ, ಕೋಲಾರ ಅವರು ಬಣ್ಣಿಸಿದ್ದಾರೆ. ಇದನ್ನು ಸರ್ಕಾರವು ಒಪ್ಪಿಕೊಂಡು ದಂಡನೆಯನ್ನು ವಿಧಿಸಲು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಅದೇಶ ಸಂಖ್ಯೆ : ಸಿಆಸುಇ 435 ಎಸ್‌ಇಎನ್ 2006, ಬೆಂಗಳೂರು, ದಿನಾಂಕ : 12ನೇ ಏಪ್ರಿಲ್ 2010**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(ii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಈ. ರಾಮಕೃಷ್ಣಪ್ಪ, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರಿಗೆ ಈ ಮೂಲಕ "ವಾಗ್ದಂಡನೆ" ವಿಧಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1010

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು–3)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ) ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಡಿಪಿಎಆರ್ 464 ಎಸ್‌ಎಎಸ್ 1998, ದಿನಾಂಕ : 14–07–1999
2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 276 ಸಅಸೇ 2009, ದಿನಾಂಕ : 05–06–2009
3. ಅನಧಿಕೃತ ಟಿಪ್ಪಣಿ ಸಂಖ್ಯೆ : ಅಪಜೀ 37 ಇಪಿಸಿ 2003, ದಿನಾಂಕ : 19–03–2010

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರದ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿ ಶಾಸ್ತ್ರ) ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಿ ನಿಯಮಿತವಾಗಿ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 05–06–2009ರ ಆದೇಶದಲ್ಲಿ ಈ ಹುದ್ದೆಯನ್ನು ದಿನಾಂಕ : 01–04–2008 ರಿಂದ 31–03–2010ರವರೆಗೆ ಮುಂದುವರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ) ಹುದ್ದೆಯನ್ನು ದಿನಾಂಕ 01–04–2010 ರಿಂದ 31–03–2011 ರವರೆಗೆ ಮುಂದುವರಿಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 276 ಸಅಸೇ 2009, ಬೆಂಗಳೂರು, ದಿನಾಂಕ : 07–04–2010**

ಕರ್ನಾಟಕ ಸರ್ಕಾರದ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿ ಶಾಸ್ತ್ರ) ಹುದ್ದೆಯನ್ನು ದಿನಾಂಕ 01–04–2010 ರಿಂದ 31–03–2011ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಇಕ : 10–07–1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1011

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀ ಆರ್. ಕೆ. ಬೇಗಾರ್, ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ಉಪ ವಿಭಾಗಾಧಿಕಾರಿ, ಯಾದಗೀರ್ ಹಾಗೂ ಅಧ್ಯಕ್ಷರು, ಭೂ ನ್ಯಾಯ ಮಂಡಳಿ, ಸುರಪುರ ಇವರ ವಿರುದ್ಧ ಇಲಾಖಾ ವಿಚಾರಣೆ – ಅಂತಿಮ ಆದೇಶ.

**ಓದಲಾಗಿದೆ :**
1. ದಿನಾಂಕ : 21–07–07ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 077 ಎಸ್‌ಇಎನ್ 07
2. ಅಪರ ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ದಿನಾಂಕ : 09–04–08
3. ದಿನಾಂಕ : 29–01–09 ಮತ್ತು 08–04–09ರ ಪತ್ರ ಸಂಖ್ಯೆ : ಸಿಆಸುಇ 195 ಕೆಇವಿ 07
4. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ದಿನಾಂಕ : 23–07–09

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ಶ್ರೀ ಆರ್. ಕೆ. ಬೇಗಾರ್, ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಇವರು ಈ ಹಿಂದೆ ಉಪ ವಿಭಾಗಾಧಿಕಾರಿ, ಯಾದಗೀರ್ ಹಾಗೂ ಅಧ್ಯಕ್ಷರು, ಭೂ ನ್ಯಾಯ ಮಂಡಳಿ,

ಸುರಪುರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಗೇಣಿ ಮಂಜೂರಾತಿ ಪ್ರಕರಣವೊಂದಕ್ಕೆ ಸಂಬಂಧಿಸಿದಂತೆ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶವನ್ನು ಪಾಲಿಸದೆ ಕಾನೂನು ಬಾಹಿರವಾಗಿ ಆದೇಶ ಹೊರಡಿಸಿರುವ ಆರೋಪಗಳಲ್ಲಿನ ಸತ್ಯಾಸತ್ಯತೆಯ ಬಗ್ಗೆ ಇಲಾಖಾ ವಿಚಾರಣಾ ನಡೆಸಿ ವರದಿ ಸಲ್ಲಿಸಲು ಅಪರ ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪ ವಿಭಾಗಾಧಿಕಾರಿ, ಯಾದಗೀರ್ ಉಪ ವಿಭಾಗ, ಯಾದಗೀರ್ ರವರನ್ನು ಶಿಸ್ತು ಪ್ರಾಧಿಕಾರಿಯ ಪರವಾಗಿ ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ, ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಇದರಂತೆ (1) ಆಪಾದಿತರು ಸುರಪುರ ತಾಲ್ಲೂಕಿನ ಭೂ ನ್ಯಾಯ ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಬೊಮ್ಮನಹಳ್ಳಿ ಗ್ರಾಮದ ಸರ್ವೆ ನಂ 42 ರ 12-35 ಎಕರೆ ಜಮೀನಿನ ಭೂ ನ್ಯಾಯ ಮಂಡಳಿಯ ಗೇಣಿ ಮಂಜೂರಾತಿಯನ್ನು ಉಚ್ಚ ನ್ಯಾಯಾಲಯವು ರದ್ದುಪಡಿಸಿ, ಪುನಃ ಹೊಸದಾಗಿ ವಿಚಾರಣೆ ನಡೆಸುವಂತೆ ಆದೇಶಿಸಿದ್ದರೂ, ಮಂಡಳಿ ಸದಸ್ಯರ ಬಹುಮತವಿಲ್ಲದೆ ಹಾಗೂ ಪ್ರತಿವಾದಿಯ ಅನುಪಸ್ಥಿತಿಯಲ್ಲಿ ಮತ್ತು ಸದಸ್ಯರ ವೈತಿರಿಕ್ತ ಅಭಿಪ್ರಾಯಕ್ಕೆ ವಿರುದ್ಧವಾಗಿ ಏಕಪಕ್ಷೀಯವಾಗಿ ಅರ್ಜಿದಾರರ ಪರವಾಗಿ ಹೊರಡಿಸಿದ ಆದೇಶವು ಕಾನೂನು ಬಾಹಿರ ಆದೇಶವೆಂಬ ಆರೋಪವು ಮಂಡನಾಧಿಕಾರಿಗಳ ಹೇಳಿಕೆ ಹಾಗೂ ಲಿಖಿತ ವಾದದಿಂದ ಸಾಬೀತಾಗಿರುತ್ತದೆ. (2) ತಮಗೆ ಸದರಿ ಹುದ್ದೆಯಿಂದ ವರ್ಗಾವಣೆಯಾಗಿರುವುದಾಗಿ ತಿಳಿಸಿದ್ದರೂ ಸಹ, ಗೇಣಿ ಮಂಜೂರಾತಿ ಪ್ರಕರಣವೊಂದರಲ್ಲಿ ಭೂ ಮಾಲೀಕರ ಪರ ನ್ಯಾಯವಾದಿಗಳಿಗೆ ವಾದ ಮಂಡಿಸಲು ಅವಕಾಶ ನೀಡದೆ, ಗೇಣಿದಾರರ ಪರ ತೀರ್ಪು ನೀಡುವ ದುರುದ್ದೇಶದಿಂದ ವಿಚಾರಣಾ ದಿನಾಂಕ ನಿಗದಿಪಡಿಸದೇ, ಸಂಬಂಧಿಸಿದವರಿಗೆ ನೋಟೀಸು ಜಾರಿ ಮಾಡದೇ ಆತುರಾತುರವಾಗಿ ಕಾನೂನುಬಾಹಿರವಾಗಿ ಏಕಪಕ್ಷೀಯವಾಗಿ ಮಂಡಳಿ ಸದಸ್ಯರ ನಿರ್ಣಯಕ್ಕೆ ವಿರುದ್ಧವಾಗಿ ಆಪಾದಿತರು ನಿರ್ಣಯ ಕೈಗೊಂಡಿರುವ ಆರೋಪವು ಉಚ್ಚ ನ್ಯಾಯಾಲಯದಲ್ಲಿ ಆಪಾದಿತರು ಸಲ್ಲಿಸಿದ ಅಫಿಡವಿಟ್‌ನಿಂದ ಹಾಗೂ ಲಿಖಿತ ವಾದದಲ್ಲಿನ ವೈರುದ್ಯದಿಂದ ಸಾಬೀತಾಗಿರುತ್ತದೆ. ವಿಚಾರಣಾ ವರದಿಯನ್ನು ಪರಿಶೀಲಿಸಿ, ಸರ್ಕಾರವು ಅಂಗೀಕರಿಸುತ್ತಾ, ಆರೋಪಕ್ಕೆ ತಕ್ಕುದಾದ ದಂಡನೆಯನ್ನು ವಿಧಿಸುವ ಪೂರ್ವದಲ್ಲಿ ಪ್ರಕ್ರಿಯೆಯನ್ನು ಪಾಲಿಸಿದ ನಂತರ, ಆರೋಪಿತ ಅಧಿಕಾರಿಯು ಸಲ್ಲಿಸಿದ ಲಿಖಿತ ಅಹವಾಲಿನಲ್ಲಿ ಆರೋಪಮುಕ್ತಗೊಳಿಸಲು ಪರಿಗಣಿಸುವಂತಹ ಯಾವುದೇ ಹೊಸ ಅಂಶಗಳು ಕಂಡುಬಂದಿಲ್ಲದಿರುವುದರಿಂದ, ಆಪಾದಿತರು ವಿಚಾರಣಾ ವರದಿಯನ್ನು ಔಪಚಾರಿಕವಾಗಿ ವಿರೋಧಿಸುತ್ತಿದ್ದಾರೆಂದು ಸರ್ಕಾರವು ನಿರ್ಣಯಿಸಿದೆ.

ಆರೋಪಿತರ ವಿರುದ್ಧ ಸಾಬೀತಾದ ಆರೋಪಗಳಿಗೆ ಅನುಗುಣವಾಗಿ ಆರೋಪಿತರ ನಿವೃತ್ತಿ ವೇತನದಲ್ಲಿ ಮಾಸಿಕ ಶೇಕಡ 25 ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಲು ಸರ್ಕಾರವು ನಿರ್ಣಯಿಸಿ, ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಈ ಪ್ರಸ್ತಾವನೆಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಇದಕ್ಕೆ ಉತ್ತರವಾಗಿ, ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ, ಸರ್ಕಾರವು ವಿಧಿಸಲು ಉದ್ದೇಶಿಸಿರುವ ದಂಡನೆಯು ತೀವ್ರವಾಗಿ ಕಂಡುಬಂದಿರುವುದರಿಂದ ಆರೋಪಿತರ ನಿವೃತ್ತಿ ವೇತನದಲ್ಲಿ ಮಾಸಿಕ ಶೇಕಡ 10ರಷ್ಟನ್ನು 5 ವರ್ಷಗಳವರೆಗೆ ಕಡಿತಗೊಳಿಸುವ ಪರಿಷ್ಕೃತ ದಂಡನೆಗೆ ಆಯೋಗವು ಮಾಡಿರುವ ಶಿಫಾರಸ್ಸನ್ನು ಅಂಗೀಕರಿಸಿ, ಸರ್ಕಾರವು, ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 195 ಕೆಇವಿ 07 ಬೆಂಗಳೂರು, ದಿನಾಂಕ 07-04-2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ಕೆ. ಬೇಗಾರ್, ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರ ವಿಶ್ರಾಂತಿ ವೇತನದಿಂದ ಮಾಸಿಕ ಶೇಕಡ 10 ರಷ್ಟನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 5 ವರ್ಷಗಳ ಅವಧಿಯವರೆಗೆ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1012

**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2)

**ಒಳಾಡಳಿತ ಸಚಿವಾಲಯ**

**ವಿಷಯ** : ಶ್ರೀ ಟಿ. ಎಂ. ವಿರುಪಾಕ್ಷಯ್ಯ, ಪಿ.ಸಿ.–404, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ** :
1) ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ, ಇವರ ಆದೇಶ ಸಂಖ್ಯೆ : 33/ಇವಿ(7)/08–09 ಓ.ಬಿ. 564/08–09, ದಿನಾಂಕ 20–10–2008.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ : ಅಪೀಲು/16/2008–09, ದಿನಾಂಕ 07–03–2009.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 19–01–2009
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2) 25/2009–10, ದಿನಾಂಕ 08–09–2009.
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 139 ಸಿಎನ್‌ಎಸ್ 09, ದಿನಾಂಕ 01–02–2010.

**ಪ್ರಸ್ತಾವನೆ :**

ಶ್ರೀ ಟಿ. ಎಂ. ವಿರುಪಾಕ್ಷಯ್ಯ, ಪಿ.ಸಿ.–404, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ. ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿ ಮತ್ತು ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

"ಶ್ರೀ ಟಿ. ಎಂ. ವಿರುಪಾಕ್ಷಯ್ಯ, ಪಿ.ಸಿ.–404, 'ಎ' ದಳ, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ. ಆದ ನೀವು ದಿನಾಂಕ 29–08–2008 ರಂದು ಉಡುಪಿ-ಶಿವಮೊಗ್ಗ, ಹನುಮಾನ್ ಮಿನಿ ಬಸ್ಸಿನಲ್ಲಿ ಮಣಿಪಾಲ್‌ನಿಂದ ಶಿವಮೊಗ್ಗಕ್ಕೆ ಪ್ರಯಾಣಿಸುತ್ತಿರುವಾಗ ಸದರಿ ಬಸ್ಸಿನ ನಿರ್ವಾಹಕರಾದ ಶ್ರೀ ಬಿ. ಶೇಖರಪ್ಪನವರ ಜೊತೆ ಬಸ್ ಟಿಕೇಟ್ ತೆಗೆದುಕೊಳ್ಳುವ ವಿಚಾರದಲ್ಲಿ ಅಸಭ್ಯವಾಗಿ ವರ್ತಿಸಿ ಅವಾಚ್ಯ ಶಬ್ಧದಿಂದ ಬೈದು ಮಾನಸಿಕವಾಗಿ ಹಿಂಸೆ ನೀಡುವ ಮೂಲಕ ದುರ್ನಡತೆ, ಬೇಜವಾಬ್ದಾರಿ ಮತ್ತು ಅಶಿಸ್ತು ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಕಮಾಂಡೆಂಟ್, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 20–10–2008ರ ಆದೇಶದಲ್ಲಿ ಅರ್ಜಿದಾರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮೂರು ತಿಂಗಳ ಕಾಲ ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು. ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ 07–03–2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪ್ರಕರಣದಲ್ಲಿ ಅರ್ಜಿದಾರರ ಪಾತ್ರವನ್ನು ಗಮನಿಸಿದಲ್ಲಿ ವಿಧಿಸಿದ ದಂಡನೆಯು ಅಧಿಕವೆಂದು ಪರಿಗಣಿಸಿ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸುವ ಕುರಿತು ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 116 ಪೊಸಿಅ 2009, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಟಿ. ಎಂ. ವಿರುಪಾಕ್ಷಯ್ಯ, ಪಿ.ಸಿ.–404, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ. ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ 20–10–2008ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ "ವಾಗ್ದಂಡನೆ"ಯನ್ನು ವಿಧಿಸಿ ಆದೇಶಿಸಿದೆ"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಟಿ. ಎನ್. ರವಿಪ್ರಕಾಶ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 816

**ಒಳಾಡಳಿತ ಸಚಿವಾಲಯ**

**ವಿಷಯ** : ಶ್ರೀ ಎಂ. ಕೆ. ಅನಿಲ್ ಕುಮಾರ್, ಪಿ.ಸಿ.–47, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ** :
1) ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ, ಇವರ ಆದೇಶ ಸಂಖ್ಯೆ : 616/ಇವಿ(7)/08–09, ದಿನಾಂಕ 11–04–2008.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ : ಅಪೀಲು/02/2008–09, ದಿನಾಂಕ 13–04–2009.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 14–05–2009
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2) 23/2009–10, ದಿನಾಂಕ 21–08–2009.
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 160 ಸಿಎನ್‌ಎಸ್ 09, ದಿನಾಂಕ 01–02–2010.

**ಪ್ರಸ್ತಾವನೆ :**

ಶ್ರೀ ಎಂ. ಕೆ. ಅನಿಲ್ ಕುಮಾರ್, ಪಿ.ಸಿ.–47, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ. ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಬೇಜವಾಬ್ದಾರಿ ಮತ್ತು ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

> "ಶ್ರೀ ಎಂ. ಕೆ. ಅನಿಲ್ ಕುಮಾರ್, ಪಿ.ಸಿ.–47, 'ಎಫ್' ದಳ, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ. ಆದ ನೀವು ಶ್ರೀ ಬಿ. ದೇವೇಂದ್ರಪ್ಪ, ಸಹಾಯಕ ಕಮಾಂಡೆಂಟ್‌ರವರ ವಿರುದ್ಧ ಕ್ರಿಮಿನಲ್ ಪ್ರಕರಣ ದಾಖಲಾಗಿರುವ ವಿಚಾರಕ್ಕೆ ಸಂಬಂಧಿಸಿದಂತೆ ದಿನಾಂಕ 16–08–06 ರಂದು ಮನವಿಯನ್ನು ನಿಯಮಾನುಸಾರ ಸೂಕ್ತ ಪ್ರಾಧಿಕಾರಿಗಳ ಮೂಲಕ ಕಳುಹಿಸದೆ ನೇರವಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, ಬೆಂಗಳೂರು ರವರಿಗೆ ಸಲ್ಲಿಸಿರುತ್ತೀರಿ. ನೀವು ಈ ಕಛೇರಿಯ ಮುಖಾಂತರ ಅರ್ಜಿ ಸಲ್ಲಿಸದೆ ನಡತೆ ಉಲ್ಲಂಘನೆ ಮೀರಿ ನಿಯಮ ಬಾಹಿರವಾಗಿ ವರ್ತಿಸಿ ಬೇಜವಾಬ್ದಾರಿ ಮತ್ತು ಅಶಿಸ್ತು ಪ್ರದರ್ಶಿಸಿರುತ್ತೀರಿ"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಕಮಾಂಡೆಂಟ್, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 11–04–2008ರ ಆದೇಶದಲ್ಲಿ ಅರ್ಜಿದಾರ ವಾರ್ಷಿಕ ವೇತನ ಬಡ್ತಿಯನ್ನು ಆರು ತಿಂಗಳ ಕಾಲ ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು. ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ 13–04–2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಸರ್ಕಾರವು ಪರಿಗಣಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 107 ಪೊಸಿಅ 2009, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ. ಕೆ. ಅನಿಲ್ ಕುಮಾರ್, ಪಿ.ಸಿ.–47, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ. ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ 11–04–2008ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ "ವಾಗ್ದಂಡನೆ"ಯನ್ನು ವಿಧಿಸಿ ಆದೇಶಿಸಿದೆ"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಟಿ. ಎನ್. ರವಿಪ್ರಕಾಶ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 817

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ** : 2009-10ನೇ ಸಾಲಿನ ಮಾಣಿಕ್ಯವೇಲು ಮ್ಯಾನಷನ್ ಕಟ್ಟಡದ ಬಾಡಿಗೆ ಹಣವನ್ನು ಪಾವತಿ ಮಾಡಲು ಹಣ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ** : ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ ಕಸನಿ 42 ಮಾಣಿಕ್ಯವೇಲು 2009-10, ದಿನಾಂಕ 28-08-2009 ಮತ್ತು 09-03-2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 28-08-2009ರ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ನ್ಯಾಷನಲ್ ಗ್ಯಾಲರಿ ಆಫ್ ಮಾರ್ಡನ್ ಆರ್ಟ್ ಸಂಸ್ಥೆಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ 30 ವರ್ಷಗಳ ಅವಧಿಗೆ ಗುತ್ತಿಗೆ ಪಡೆಯಲಾಗಿದ್ದು ಮಾಣಿಕ್ಯವೇಲು ಮ್ಯಾನಷನ್ ಕಟ್ಟಡದ ಬಾಡಿಗೆಯನ್ನು ಪ್ರತಿ ವರ್ಷವು ಕರ್ನಾಟಕ ಗೃಹ ಮಂಡಳಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಪಾವತಿಸುವುದರಿಂದ 2009-10ನೇ ಸಾಲಿಗೂ ಸಹ ಕಟ್ಟಡದ ಬಾಡಿಗೆ ಬಾಬ್ತು ರೂ. 30,91,812/- ಗಳನ್ನು ಕರ್ನಾಟಕ ಗೃಹ ಮಂಡಳಿಗೆ ಪಾವತಿ ಮಾಡಬೇಕಾಗಿರುತ್ತದೆ. ಬಾಡಿಗೆ ಪಾವತಿ ಮಾಡಲು ಪ್ರಸಕ್ತ ಸಾಲಿನ ಕ್ರಿಯಾಯೋಜನೆಯಲ್ಲಿ ಹಣವನ್ನು ಅವಕಾಶ ಮಾಡಿಕೊಳ್ಳಲಾಗಿದೆ. ಆದ್ದರಿಂದ ಮಾಣಿಕ್ಯವೇಲು ಮ್ಯಾನಷನ್ ಕಟ್ಟಡದ ಬಾಡಿಗೆಯ ಮೊತ್ತ ರೂ. 30,91,812/- ಗಳನ್ನು ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರಿಗೆ ಪಾವತಿಸಲು ಲೆಕ್ಕಶೀರ್ಷಿಕೆ 2205-00-001-0-01-071 ಕಟ್ಟಡಗಳ ವೆಚ್ಚಗಳು ಯೋಜನೇತರ ಅಡಿಯಲ್ಲಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

2009-10ನೇ ಸಾಲಿನ ಮಾಣಿಕ್ಯವೇಲು ಮ್ಯಾನಷನ್ ಕಟ್ಟಡದ ಬಾಡಿಗೆ ಹಣವನ್ನು ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರಿಗೆ ಪಾವತಿ ಮಾಡಲು ರೂ. 30,91,812/-ಗಳನ್ನು ಬಿಡುಗಡೆಗೊಳಿಸಲು ಸರ್ಕಾರವು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 118 ಕಸನಿ 2009, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು 2009-10ನೇ ಸಾಲಿನ ಮಾಣಿಕ್ಯವೇಲು ಮ್ಯಾನಷನ್ ಕಟ್ಟಡದ ಬಾಡಿಗೆ ಹಣವನ್ನು ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರಿಗೆ ಪಾವತಿ ಮಾಡಲು ರೂ. 30,91,812/- (ರೂ ಮೂವತ್ತು ಲಕ್ಷ ತೊಂಭತ್ತೊಂದು ಸಾವಿರದ ಎಂಟನೂರ ಹನ್ನೆರಡು ಮಾತ್ರ) ಗಳನ್ನು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2009-10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205-00-001-0-01-071 (ಯೋಜನೇತರ) ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 18-03-2010ರ ಟಿಪ್ಪಣಿ ಸಂಖ್ಯೆ : ಶಿಇ 597 ಐಎಫ್ (ಬಿ ಮತ್ತು ಎ) 2010 ರಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ. ಕೆ. ಧರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 818

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ** : ಕನ್ನಡ ಭವನದ ವಸತಿಯೇತರ ಸೇವಾ ತೆರಿಗೆ ಹಾಗೂ ಉಪಕರಣಗಳ ಶುಲ್ಕ ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ** : ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ ಕಸನಿ 23 ಆಡಳಿತ 2009-10, ದಿನಾಂಕ 08-03-2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 08-03-2010ರ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರಪಾಲಿಕೆ, ಬೆಂಗಳೂರು ಇವರು ದಿನಾಂಕ 17-02-2010 ರಂದು ಕನ್ನಡ ಭವನದ ಸ್ವತ್ತಿಗೆ ಸಂಬಂಧಿಸಿದ ಕೆಎಂಸಿ ಕಾಯ್ದೆ 1976ರ ನಿಬಂಧನೆ 110ರ ಮೇರೆಗೆ ಆಸ್ತಿ ತೆರಿಗೆ ವಿನಾಯಿತಿ ಪಡೆದ ಸ್ವತ್ತಿನ

ಸ್ಥಳ ಪರಿಶೀಲನೆ, ಅಳತೆ ಲೆಕ್ಕಾಚಾರ ಮಾಡಿ 2006–07, 2007–08ನೇ ಸಾಲಿನ ವರ್ಷದಲ್ಲಿ ರೂ. 9,57,686/– ಗಳು 2008–09ನೇ ಸಾಲಿಗೆ ರೂ. 5,44,500/–ಗಳು ಹಾಗೂ 2009–10ನೇ ಸಾಲಿಗೆ ರೂ. 5,07,592/–ಗಳು ಸೇರಿದಂತೆ ಒಟ್ಟು ರೂ. 20,09,778/–ಗಳು ಸೇವಾ ತೆರಿಗೆಯನ್ನು ಪಾವತಿಸಲು ಸೂಚಿಸಿರುತ್ತಾರೆ. ಅದರಂತೆ ಸದರಿ ಹಣವನ್ನು ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಬೆಂಗಳೂರು ಇವರಿಗೆ ಪಾವತಿ ಮಾಡಬೇಕಾಗಿದೆ. ಈ ಹಣವನ್ನು ಪ್ರಸಕ್ತ ಸಾಲಿನ ಲೆಕ್ಕಶೀರ್ಷಿಕೆ 2205–00–001–0–01–059 (ಯೋಜನೆ) ಮತ್ತು ಆಡಳಿತದಡಿಯಲ್ಲಿ ಭರಿಸಿ ಮಂಜೂರು ಮಾಡಬೇಕೆಂದು ಕೋರಿರುತ್ತಾರೆ.

ಕನ್ನಡ ಭವನದ ವಸತಿಯೇತರ ಸೇವಾ ತೆರಿಗೆ ಹಾಗೂ ಉಪಕರಣಗಳ ಶುಲ್ಕ ಪಾವತಿ ಮಾಡಲು ರೂ. 20,09,778/–ಗಳ ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 40 ಕಸನಿ 2010, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕನ್ನಡ ಭವನದ ವಸತಿಯೇತರ ಸೇವಾ ತೆರಿಗೆ ಹಾಗೂ ಉಪಕರಣಗಳ ಶುಲ್ಕವನ್ನು **ಆಯುಕ್ತರು,** ಬೃಹತ್ ಬೆಂಗಳೂರು ಮಹಾನಗರಪಾಲಿಕೆ, ಬೆಂಗಳೂರು ಇವರಿಗೆ ಪಾವತಿ ಮಾಡಲು ರೂ. 20,09,778/– (ರೂ. ಇಪ್ಪತ್ತು ಲಕ್ಷ ಒಂಭತ್ತು ಸಾವಿರದ ಏಳುನೂರ ಎಪ್ಪತ್ತೆಂಟು ಮಾತ್ರ) ಗಳನ್ನು ಕೆಳಕಂಡ ಷರತ್ತಿಗೊಳಪಟ್ಟು ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಬಿಡುಗಡೆಗೊಳಿಸಿ ಆದೇಶಿಸಿದೆ.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–001–0–01–059 (ಯೋಜನೆ) ಇತರೆ ಖರ್ಚು ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 17–03–2010ರ ಟಿಪ್ಪಣಿ ಸಂಖ್ಯೆ : ಶಿಇ 600 ಐಎಫ್ (ಬಿ ಮತ್ತು ಎ) 2010 ರಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ಕೆ. ಭರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 819

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ 2009–10ನೇ ಸಾಲಿನ ಆಯವ್ಯಯದ ಯೋಜನೇತರ ಮೊಬಲಗಿನ ಎರಡನೇ ಕಂತನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 28, ಕೆಎಲ್ 2009, ದಿನಾಂಕ : 24–6–2009.

2) ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರ ಪತ್ರ ಸಂಖ್ಯೆ : ಕಅಪ್ರಾ/ಕಾ/79/2008–09, ದಿನಾಂಕ 18–2–2010.

**ಪ್ರಸ್ತಾವನೆ :**

ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ 2009–10ನೇ ಸಾಲಿನ ಆಯವ್ಯಯದಲ್ಲಿ ಯೋಜನೇತರ ಬಾಬ್ತಿನಲ್ಲಿ ರೂ. 50.48 ಲಕ್ಷಗಳನ್ನು ನಿಗದಿಪಡಿಸಲಾಗಿದೆ. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ 2009–10ನೇ ಸಾಲಿನ ಆಯವ್ಯಯದ ಯೋಜನೇತರ ಅನುದಾನದಲ್ಲಿ ಮೊದಲನೇ ಕಂತಾಗಿ ರೂ. 25.24 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ (2)ರಲ್ಲಿ ಓದಲಾದ ದಿನಾಂಕ 18–2–2010ರ ಪತ್ರದಲ್ಲಿ ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ರವರು 2009–10ನೇ ಸಾಲಿನ ಆಯವ್ಯಯದಲ್ಲಿ ಸೂಚಿತವಾಗಿರುವ ರೂ. 50.48 ಲಕ್ಷಗಳಲ್ಲಿ ಮೊದಲನೇ ಕಂತು ರೂ. 25.24 ಲಕ್ಷಗಳನ್ನು ಬಿಡುಗಡೆಗೊಳಿಸಿದ್ದು, ಎರಡನೇ ಕಂತಾಗಿ ರೂ. 25.24 ಲಕ್ಷಗಳನ್ನು ಬಿಡುಗಡೆ ಮಾಡಲು ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ 2009–10ನೇ ಸಾಲಿನಲ್ಲಿ ನಿಗದಿಪಡಿಸಿರುವ ಯೋಜನೇತರ ಅನುದಾನ ರೂ. 50.48 ಲಕ್ಷಗಳಲ್ಲಿ ಎರಡನೇ ಕಂತಾಗಿ ರೂ. 25.24 ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 28 ಕೆಓಎಲ್ 2009, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2010**

ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ 2009–10ನೇ ಸಾಲಿನಲ್ಲಿ ನಿಗದಿಪಡಿಸಿರುವ ಯೋಜನೇತರ ಅನುದಾನ ರೂ. 50.48 ಲಕ್ಷಗಳಲ್ಲಿ ಒಂದನೇ ಕಂತನ್ನು ಬಿಡುಗಡೆ ಮಾಡಿದ್ದು ಬಾಕಿ ಇರುವ ಎರಡನೇ ಹಾಗೂ ಅಂತಿಮ ಕಂತಿನ ರೂ. 25.24 ಲಕ್ಷಗಳನ್ನು (ರೂಪಾಯಿ ಇಪ್ಪತ್ತೈದು ಲಕ್ಷದ ಇಪ್ಪತ್ನಾಲ್ಕು ಸಾವಿರಗಳು ಮಾತ್ರ) ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಇವರಿಗೆ ಬಿಡುಗಡೆ ಮಾಡಿದೆ. ಈ ಸಂಬಂಧ ವೆಚ್ಚವನ್ನು 2009–10ನೇ ಸಾಲಿನ ಯೋಜನೇತರ ಆಯವ್ಯಯ ಲೆಕ್ಕಶೀರ್ಷಿಕೆ 2052–00–092–0–09–101 ಯೋಜನೇತರ ಅಡಿಯಲ್ಲಿ ಭರಿಸತಕ್ಕದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ ಶಿಇ 598 ಐಎಫ್(ಬಿ ಮತ್ತು ಎ) 2010 ದಿನಾಂಕ 18–03–2010ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ಕೆ. ಧರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 820 ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : 2009–10ನೇ ಸಾಲಿನ ಮುಂದುವರೆದ ಯೋಜನೆಯ ಹೊಸ ಘಟಕಗಳ ಅಡಿಯಲ್ಲಿ ಹೊಸ ಹುದ್ದೆಗಳ ಸೃಜನೆ, ಯಂತ್ರೋಪಕರಣಗಳ ಖರೀದಿ ಹಾಗೂ ವಾಹನ ಖರೀದಿಗೆ–ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ** : ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಮೈಸೂರು ರವರ ಪತ್ರ ಸಂಖ್ಯೆ ಡಿಎಎಂ.ಎಸಿಟಿ. 1:21/2009–10, ದಿನಾಂಕ 25–08–2009, 18–11–2009 ಮತ್ತು 22–12–2009.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿನ ಪತ್ರಗಳಲ್ಲಿ ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಿ 2009–10ನೇ ಸಾಲಿನ ಮುಂದುವರೆದ ಯೋಜನೆಯ ಹೊಸ ಘಟಕಗಳ ಅಡಿಯಲ್ಲಿ ಹೊಸ ಹುದ್ದೆಗಳ ಸೃಜನೆ, ಯಂತ್ರೋಪಕರಣಗಳ ಖರೀದಿಗೆ ಸಂಬಂಧಿಸಿದಂತೆ ಪ್ರಸ್ತಾವನೆ ಸಲ್ಲಿಸಿರುವರು, ಆರ್ಥಿಕ ಮಿತವ್ಯಯದ ಆದೇಶದ ಹಿನ್ನೆಲೆಯಲ್ಲಿ ಈ ಸಾಲಿಗೆ ಹೊಸ ಹುದ್ದೆಗಳ ಸೃಜನೆ ಮತ್ತು ವಾಹನ ಖರೀದಿಗಳನ್ನು ನಿಷೇಧಿಸಲಾಗಿರುತ್ತದೆ. ಯಂತ್ರೋಪಕರಣಗಳ ಖರೀದಿ ಸಂಬಂಧದಲ್ಲಿ ಪರಿಶೀಲಿಸಲಾಗಿ, ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 051 ಸಾಮಾನ್ಯ ವೆಚ್ಚಗಳ ಅಡಿಯಲ್ಲಿ ಒಟ್ಟು ರೂ. 6.02 ಲಕ್ಷ ಹಣದಲ್ಲಿ ಪ್ರಿಂಟರ್ ಜೊತೆ ಡಿಜಿಟಲ್ ಕಾಪಿಯರ್ ಯಂತ್ರ, ಡಿಜಿಟಲ್ ಕಮ್ಯುನಿಕೇಷನ್ ಸಿಸ್ಟಮ್–ಇಪಿಎಬಿಎಕ್ಸ್ ಮತ್ತು ಎಲೆಕ್ಟ್ರಾನಿಕ್ ಬಿಲ್ಲಿಂಗ್ ಮೆಷಿನ್‌ಗಳನ್ನು 12ನೇ ಹಣಕಾಸು ಆಯೋಗದ ಅಡಿಯಲ್ಲಿ ಆಡಳಿತಾತ್ಮಕ ವೆಚ್ಚಕ್ಕೆ ಒದಗಿಸಿರುವ ರೂ. 32.00 ಲಕ್ಷಗಳ ಅನುದಾನದಿಂದ ಭರಿಸಲು ನಿರ್ಧರಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 215 ಕೆಎಂಯು 2009, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2010**

ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಇವರಿಗೆ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 051 ಸಾಮಾನ್ಯ ವೆಚ್ಚಗಳ ಅಡಿಯಲ್ಲಿ ಒಟ್ಟು ರೂ. 6.02 ಲಕ್ಷ (ರೂ. ಆರು ಲಕ್ಷ ಎರಡು ಸಾವಿರ ಮಾತ್ರ) ಹಣದಲ್ಲಿ ಪ್ರಿಂಟರ್ ಜೊತೆ ಡಿಜಿಟಲ್ ಕಾಪಿಯರ್ ಯಂತ್ರ, ಡಿಜಿಟಲ್ ಕಮ್ಯುನಿಕೇಷನ್ ಸಿಸ್ಟಮ್–ಇಪಿಎಬಿಎಕ್ಸ್ ಮತ್ತು ಎಲೆಕ್ಟ್ರಾನಿಕ್ ಬಿಲ್ಲಿಂಗ್ ಮೆಷಿನ್‌ಗಳನ್ನು 12ನೇ ಹಣಕಾಸು ಆಯೋಗದ ಅಡಿಯಲ್ಲಿ ಆಡಳಿತಾತ್ಮಕ ವೆಚ್ಚಕ್ಕೆ ಒದಗಿಸಿರುವ ರೂ. 32.00 ಲಕ್ಷಗಳ ಅನುದಾನದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯಿದೆ 1999 ಮತ್ತು ಅದರ ನಿಯಮಗಳು 2000 ಅಡಿಯಲ್ಲಿ ಅದನ್ನು ಪಾಲಿಸುವ ಷರತ್ತಿಗೊಳಪಟ್ಟು ಮಂಜೂರಾತಿ ನೀಡಿದೆ.

2009–10ನೇ ಸಾಲಿನ ಮುಂದುವರೆದ ಯೋಜನೆಯ ಹೊಸ ಘಟಕಗಳ ಅಡಿಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯಿಂದ ಹಮ್ಮಿಕೊಳ್ಳಲಾದ ಕಾಮಗಾರಿಗಳ ಮೇಲ್ವಿಚಾರಣೆ ಹಾಗೂ ಇತರೇ ಉದ್ದೇಶಗಳಿಗೆ ವಾಹನಗಳು ಅವಶ್ಯವಿದ್ದಲ್ಲಿ, ಸಿಆಸುಇ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 139 ಶಿವಾನೀ 2004, ದಿನಾಂಕ 12–09–2006 ರನ್ವಯ ಮೂರು ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ಪಡೆಯಲು ಸರ್ಕಾರದ ಮಂಜೂರಾತಿ ನೀಡಿದೆ.

ಈ ಸಂಬಂಧ ಉಂಟಾಗುವ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 051 ಸಾಮಾನ್ಯ ವೆಚ್ಚಗಳ ಅಡಿಯಲ್ಲಿ ಭರಿಸತಕ್ಕದ್ದು.

ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 1152 ವೆಚ್ಚ–7/2009 ದಿನಾಂಕ 23–02–2010ರಲ್ಲಿ ನೀಡಿದ ಸಹಮತಿಯನ್ವಯ ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–96ರಲ್ಲಿ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ಕೆ. ಭರ್ಮರಾಜಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 821 ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : 12ನೇ ಹಣಕಾಸು ಆಯೋಗದಡಿಯಲ್ಲಿನ ಅನುದಾನವನ್ನು ಮರು ಹಂಚಿಕೆ ಮಾಡುವ ಕುರಿತು.

**ಪ್ರಸ್ತಾವನೆ :**

ದಿನಾಂಕ 08–03–2010 ರಂದು ಅಪರ ಮುಖ್ಯ ಕಾರ್ಯದರ್ಶಿಗಳ ನಡೆಸಿದ ಸಭೆಯಲ್ಲಿ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರು 12ನೇ ಹಣಕಾಸು ಆಯೋಗದಲ್ಲಿ ಇಲಾಖೆಗೆ ನೀಡಿದ ರೂ. 500.00 ಲಕ್ಷ ಅನುದಾನದ ಪೈಕಿ ರೂ. 70.00 ಲಕ್ಷದಷ್ಟು ಹಣವನ್ನು ದಿನಾಂಕ 31–03–2010ರ ಒಳಗಾಗಿ ಖರ್ಚು ಮಾಡಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿದ್ದಾರೆ. ಸಭೆಯಲ್ಲಿ ಭಾಗವಹಿಸಿದ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯ ನಿರ್ದೇಶಕರು ಇಲಾಖೆಗೆ ಹೆಚ್ಚುವರಿ ಅನುದಾನ ಕೋರಿದರು. ಅಪರ ಮುಖ್ಯಕಾರ್ಯದರ್ಶಿಗಳು ಇದರ ಬಗ್ಗೆ ಇಲಾಖೆಯೊಂದಿಗೆ ಚರ್ಚಿಸಿ ಹಂಚಿಕೆ ಬಗ್ಗೆ ಕಡತದಲ್ಲಿ ಮಂಡಿಸಲು ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಮತ್ತು ವಾರ್ತಾ ಇಲಾಖೆ ಇವರಿಗೆ ಸೂಚಿಸಿದರು. ನಂತರ ಕಾರ್ಯದರ್ಶಿಗಳು ಸಭೆ ನಡೆಸಿರುತ್ತಾರೆ. ಪತ್ರಾಗಾರ ಇಲಾಖೆಗೆ ಮೈಸೂರಿನ ಅರಮನೆ ದಾಖಲೆಗಳ ಡಿಜಿಟೈಜ್‌ಡ್ ಡಾಟಾದಿಂದ ಮೈಕ್ರೋಫಿಲಂ ಸುರುಳಿಗಳಿಗೆ ಅಳವಡಿಸುವ ಕಾರ್ಯಕ್ರಮಕ್ಕೆ ರೂ. 30.00 ಲಕ್ಷಗಳ ಅವಶ್ಯಕತೆ ಇದೆಯೆಂದು ತಿಳಿಸಿರುತ್ತಾರೆ. ಅದೇ ರೀತಿ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಇವರು ಗುಲ್ಬರ್ಗಾದಲ್ಲಿ ಗ್ರಂಥಾಲಯ ಕಟ್ಟಡ ಮುಕ್ತಾಯಗೊಳಿಸಲು ಹೆಚ್ಚುವರಿ ಹಣ ರೂ. 40.00 ಲಕ್ಷಗಳ ಅವಶ್ಯಕತೆ ಇದೆಯೆಂದು ನಂತರ ತಿಳಿಸಿರುತ್ತಾರೆ.

ಮೇಲಿನಂತೆ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯ ಅನುಮೋದನೆಗಾಗಿ ಕಳುಹಿಸಲಾಗಿತ್ತು. ಈ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯು ತನ್ನ ಅನುಮೋದನೆ ನೀಡಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 52 ಕೆಎಂಯು 2010, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 12ನೇ ಹಣಕಾಸು ಆಯೋಗದ ಅನುದಾನದಲ್ಲಿ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರಿಗೆ ಈಗಾಗಲೇ ಹಂಚಿಕೆ ಮಾಡಿರುವ ಮೊತ್ತದಿಂದ ರೂ. 70.00 ಲಕ್ಷಗಳನ್ನು (ರೂಪಾಯಿ ಎಪ್ಪತ್ತು ಲಕ್ಷ ಮಾತ್ರ) ಹಿಂದಕ್ಕೆ ಪಡೆದು ಸದರಿ ಹಣದಲ್ಲಿ ರಾಜ್ಯ ಪತ್ರಾಗಾರ ಇಲಾಖೆಗೆ, ಮೈಸೂರಿನ ಅರಮನೆ ದಾಖಲೆಗಳನ್ನು ಡಿಜಿಟೈಜ್‌ಡ್ ಡಾಟಾದಿಂದ ಮೈಕ್ರೋಫಿಲಂ ಸುರುಳಿಗಳಿಗೆ ಅಳವಡಿಸುವ ಕಾರ್ಯಕ್ರಮಕ್ಕೆ ರೂ. 30.00 ಲಕ್ಷ (ರೂ. ಮೂವತ್ತು ಲಕ್ಷ ಮಾತ್ರ) ಗಳನ್ನು ಹಾಗೂ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಇವರಿಗೆ ಗುಲ್ಬರ್ಗಾದಲ್ಲಿ ಗ್ರಂಥಾಲಯ ಕಟ್ಟಡ ಮುಕ್ತಾಯಗೊಳಿಸಲು ರೂ. 40.00 ಲಕ್ಷ (ರೂ. ನಲವತ್ತು ಲಕ್ಷ ಮಾತ್ರ) ಗಳನ್ನು ಮರು ಹಂಚಿಕೆ ಮಾಡಿ ಬಿಡುಗಡೆಗೊಳಿಸಿ, ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಟಿಪ್ಪಣಿ ಸಂಖ್ಯೆ 1679/ಎಲ್, ದಿನಾಂಕ 20–03–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ಕೆ. ಭರ್ಮರಾಜಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 822 ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2009-10ನೇ ಸಾಲಿಗೆ ಕೆಬಿಟ್ಸ್ ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 30 ಆಡವಿ 2009, ದಿನಾಂಕ 12-05-09.

(2) ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 37 ಆಡವಿ 2009, ದಿನಾಂಕ 30-05-09.

(3) ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 37 ಆಡವಿ 2009(ಪಿ), ದಿನಾಂಕ 11-02-10.

**ಪ್ರಸ್ತಾವನೆ :**

2009-10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451-00-090-2-01 ಮಾಹಿತಿ ತಂತ್ರಜ್ಞಾನ-ಉನ್ನತೀಕರಣ ಮತ್ತು ಅಭಿವೃದ್ಧಿ 059 ಇತರೆ ಖರ್ಚು (ಯೋಜನೆ) ರಡಿಯಲ್ಲಿ ರೂ.920.00 ಲಕ್ಷಗಳ ಅನುದಾನವು ಒದಗಣೆಯಾಗಿದ್ದು, ಅದರಲ್ಲಿ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (ಕೆಬಿಟ್ಸ್) ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ರೂ.80.00 ಲಕ್ಷ (ರೂ. ಎಂಬತ್ತು ಲಕ್ಷಗಳು ಮಾತ್ರ) ಗಳ ಅನುದಾನವನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

ಮೇಲೆ (2) ಮತ್ತು (3) ರಲ್ಲಿ ಓದಲಾದ ದಿನಾಂಕ 30-5-2009ರ ಮತ್ತು 11-02-2010 ಸರ್ಕಾರಿ ಆದೇಶಗಳಲ್ಲಿ ಕೆಬಿಟ್ಸ್ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ.40.00 ಲಕ್ಷ + 40.00 ಲಕ್ಷ ಒಟ್ಟು 80.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಕೆಬಿಟ್ಸ್ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ಇನ್ನೂ ರೂ.50.00 ಲಕ್ಷಗಳ ಅನುದಾನದ ಬಿಡುಗಡೆಯ ಅವಶ್ಯಕತೆ ಇರುವುದರಿಂದ ಕೆಬಿಟ್ಸ್ ಸಂಸ್ಥೆಗೆ ಸದರಿ ಉದ್ದೇಶಕ್ಕಾಗಿ ರೂ.50.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 37 ಅಡವಿ 2009 (ಪಿ), ಬೆಂಗಳೂರು, ದಿನಾಂಕ : 30-03-2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಮೇಲೆ (2) ಮತ್ತು (3)ರಲ್ಲಿ ಓದಲಾದ ದಿನಾಂಕ 30.5.2009ರ ಮತ್ತು 11-02-2010ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನವನ್ನು ಮುಂದುವರಿಸಿ, ಕೆಬಿಟ್ಸ್ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ.50.00 ಲಕ್ಷಗಳ (ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು 2009-10ನೇ ಸಾಲಿನಲ್ಲಿ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (ಕೆಬಿಟ್ಸ್) ಸಂಸ್ಥೆಗೆ ನೀಡಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2009-10ನೆ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '3451-00-090-2-01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ-059 ಇತರೆ ವೆಚ್ಚ (ಯೋಜನೆ)' ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (ಕೆಬಿಟ್ಸ್) ಸಂಸ್ಥೆಯ ಪ್ರಧಾನ ವ್ಯವಸ್ಥಾಪಕರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 50 ವೆಚ್ಚ-2/2010, ದಿನಾಂಕ 29-03-2010 ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ.ವಿ. ಕೃಷ್ಣಮೂರ್ತಿ),**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 896

**INFORMATION TECHNOLOGY, BIO TECHNOLOGY AND SCIENCE AND TECHNOLOGY SECRETARIAT**

**Sub :** Implementation of e-PCO Scheme in Karnataka – Release of grants.

**Read :** 1. Government Order No : ITD 30 ADM 2009 dated 12.5.2009.

2. Letter No. KSEDCS/MD/e-PCOs/09-10, dated 27-01-2010 of the Managing Director, KEONICS, Bangalore.

**Preamble:**

In the Budget speech for the financial year 2009-10, Hon'ble Chief Minister had announced as follows :

**"107 : For popularizing internet use in Rural areas, establishing Electronic Public Call Offices (e-PCO) will be promoted"**

The Department of Information Technology, Biotechnology and Science & Technology has decided to provide various Government services through common service centers across the State. At present, G2C services are available only in urban areas, services such as Birth Certificate, Death Certificate, Caste Certificate, Domicile Certificate, addition/deletion of name in Ration card, Land tenency certificate, Income certificate, Utility bills payment, etc. are proposed to be extended to rural areas through e-PCOs.

BSNL has provided telephone connection to 2.4 lakhs PCOs in the State. The PCO model, which emerged as the best Public Private Partnership venture, has suffered a substantial dip in the business due to rapid penetration of mobile phones. Hence, Government has decided to scale up the present PCOs to e-PCOs thereby increasing opportunities to the owner of PCOs to enhance their income and in turn, this would also reduce the challenge for the State Government to set-up new service centers across the State to provide Government services to citizen electronically. e-PCOs will also popularize internet usage in rural areas offering citizens the opportunity of conducting online transactions and this would also bridge the digital devide between urban and rural areas.

In the G.O. read at (1) above, an amount of Rs. 200 lakhs has been earmarked for implementation of the e-PCO's Scheme for the financial year 2009-2010.

Accordingly, Managing Director, KEONICS was directed to work out a model for implementation of e-PCO scheme in association with BSNL, INTEL etc. as a nodal agency for implementation of the scheme.

The Managing Director, KEONICS vide his letter referred at (2) above, has worked out a model for implementation of the e-PCO Scheme and stated that BSNL has successfully started 100 e-PCOs on a pilot basis. Hence in association with BSNL it is proposed to scale up to 10,000 e-PCOs in the following manner :-

1. BSNL will provide benefit of Rs.4,150 per e-PCO towards waiver of installation charges, supply of modem, bandwidth up to 2GB and a start up plan per e-PCO of Rs.250/-.
2. Original Equipment Manufactures (OEM) namely Intel, HCL, Novatium will provide hardware and infrastructure under the USO Fund, getting a subsidy of Rs.4,500 per e-PCO.
3. M/s. Suvidha Info service Pvt. Ltd. Will provide software solutions to each e-PCO collecting the cost amounting to Rs.9,000/- in 18 EMIs (equated Monthly Installments) of Rs. 500/- per month. There by the cash outflow for e-PCO owner is just Rs.500 per month.
4. The Government of Karnataka will provide financial support of Rs.2000/- per e-PCO towards Hardware component.

The selection of e-PCO will be made by a committee headed by MD. KEONICS with the representatives of M/s. BSNL, M/s Suvidha infoservice Pvt. Ltd., M/s. Infotech and M/s Intel members and

the committee would give due weight age to the recommendations of the Backward Classes Committee for giving priority to backward areas.

KEONICS has requested for sanction of Rs.2.00 Crores for implementation of the project.

For the financial year 2009-2010 it is considered necessary to release Rs.50.00 Lakhs initially as financial support of Government at the rate of Rs.2,000 per e-PCO to KEONICS for implementation of the project. Hence this order.

**Government Order No. ITD 03 MDA 2010, Bangalore, Dated 30 March 2010**

In the circumstances explained in the preamble, Government are pleased to accord approval for release of Rs.50 lakhs (Rupees Fifty lakhs only) to KEONICS during the financial year 2009-10 for providing the financial support of Government @ Rs.2000 (Rupees Two thousand only) per e-PCO for implementation of the e-PCO scheme as detailed in the preamble.

The selection of e-PCO will be made by a committee headed by MD. KEONICS with the representatives of M/s BSNL, M/s Suvidha infoservice Pvt. Ltd., M/s Infotech and M/s Intel members and the committee would give due weight age to the recommendations of the Backward Classes Committee for giving priority to backward areas.

The expenditure on this account shall be met from out of the budget provision made under the Head of Account **"3451-00-090-2-01 Information Technology-Promotion & Development – 059 Other Expenditure (Plan)"** for the year 2009-10.

The Administrative Officer, Directorate of Information Technology & Bio Technology Department shall draw the said grant from the Treasury duly countersigned by the Director, Information Technology & Bio Technology and disburse the amount.

The Managing Director, KEONICS shall submit the Utilization Certificate in the prescribed format through the Director, Information Technology and Biotechnology, Bangalore.

This order issues with the concurrence of Finance Department vide their Note in No.FD 49 Exp-2/2010, dated 26-03-2010.

By Order and in the name of the Governor of Karnataka,
**(M.V. Krishnamurthy)**
Under Secretary to Government,
Information Technology, Bio Technology and Science
and Technology Department

PR. 897

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಸ್.ವಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ದಾವಣಗೆರೆರವರ ಜನ್ಮ ದಿನಾಂಕ ತಿದ್ದುಪಡಿ ಪ್ರಕರಣದ ವಿಚಾರಣೆಯ ಮಂಡನಾಧಿಕಾರಿಯ ಬದಲಾವಣೆ ಕುರಿತು.

**ಓದಲಾಗಿದೆ :** (1) ಸರ್ಕಾರಿ ಆದೇಶ ಸಂಖ್ಯೆ : ಒಇ 189 ಪಿಪಿಇ 2008, ದಿನಾಂಕ 09–03–2009.
(2) ಕಾನೂನು ಇಲಾಖೆಯ ಟಿಪ್ಪಣಿ ಸಂ : ಲಾ 1 ಜದಿವಿ 2009, ದಿನಾಂಕ 24.11.2009.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ 09–03–2009ರ ಸರ್ಕಾರದ ಆದೇಶದಲ್ಲಿ ಶ್ರೀ ಎಸ್.ವಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ದಾವಣಗೆರೆರವರ ಜನ್ಮ ದಿನಾಂಕ ತಿದ್ದುಪಡಿಯ ಪ್ರಕರಣದ ವಿಚಾರಣೆಯಲ್ಲಿ ಒಳಾಡಳಿತ ಇಲಾಖೆಯ ಪರವಾಗಿ ಪ್ರಕರಣವನ್ನು ಮಂಡಿಸಲು ಮತ್ತು ವಾದವನ್ನು ವಿಚಾರಣಾಧಿಕಾರಿಯ ಮುಂದೆ ಮಂಡಿಸಲು ಶ್ರೀ ಜಿ.ಎ.ಮೂಲಿಮನಿ, ಸಹಾಯಕ ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ (ವ್ಯಾಜ್ಯ), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ವಾದೇಕ್ಷಕರು ಮತ್ತು ಪದನಿಮಿತ್ತ (ಪ್ರಭಾರ) ಸರ್ಕಾರದ ಉಪ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆರವರ ದಿನಾಂಕ 24-11-2009ರ ಟಿಪ್ಪಣಿಯಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಯನ್ವಯ ಶ್ರೀ ಜಿ.ಎ. ಮೂಲಿಮನಿರವರು ವರ್ಗಾವಣೆಗೊಂಡಿರುವುದರಿಂದ ಕಾನೂನು ಇಲಾಖೆಯ ಮತ್ತೊಬ್ಬ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಿಸುವಂತೆ ವಿಚಾರಣಾಧಿಕಾರಿಯು ಸೂಚಿಸಿರುತ್ತಾರೆ.

ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರೊಡನೆ ಸಮಾಲೋಚಿಸಿ ಸರ್ಕಾರವು ಈ ಮುಂದಿನಂತೆ ಅದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಒಇ 189 ಪಿಪಿಇ 2008, ಬೆಂಗಳೂರು, ದಿನಾಂಕ : 29-03-2010**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ, ಶ್ರೀ ಎಸ್.ವಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ದಾವಣಗೆರೆರವರ ಜನ್ಮ ದಿನಾಂಕ ತಿದ್ದುಪಡಿ ಪ್ರಕರಣದ ವಿಚಾರಣೆಗೆ ಶ್ರೀ ಜಿ.ಎ.ಮೂಲಿಮನಿರವರ ಸ್ಥಾನದಲ್ಲಿ ಸಹಾಯಕ ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ (ವ್ಯಾಜ್ಯ-7) ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ.ಸಿ. ಸಿದ್ದಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 898

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಯು. ಶ್ರೀನಿವಾಸ ಹೆಗ್ಡೆ, ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಅಧಿಕ ಸಿ.ಜೆ. (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಂಗಳೂರುರವರ ಜನ್ಮ ದಿನಾಂಕವನ್ನು ಒಪ್ಪುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರಿ ಅಧಿಸೂಚನೆ ಸಂ : ಲಾ 97 ಪಿಪಿಇ 1997, ದಿನಾಂಕ 29-01-1998

(2) ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ : ಡಿಪಿಎನ್/ಕೇಂಸ/ವಿವ/30/2007-08, ದಿನಾಂಕ 29-12-2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 29-01-1998ರ ಸರ್ಕಾರದ ಅಧಿಸೂಚನೆಯ ಕ್ರ.ಸ: 24 ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ನೇಮಕಗೊಂಡ ಶ್ರೀ ಯು. ಶ್ರೀನಿವಾಸ ಹೆಗ್ಡೆ, ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಅಧಿಕ ಸಿ.ಜೆ. (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಂಗಳೂರುರವರು ದಿನಾಂಕ 13-02-1998 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ನಿರ್ದೇಶಕರು, ಅಭಿಯೋಗ ಸರ್ಕಾರಿ ವ್ಯಾಜ್ಯಗಳ ಇಲಾಖೆರವರ ದಿನಾಂಕ : 29.12.2009ರ ಪತ್ರದಲ್ಲಿ, ಮೂಡಿಗೆರೆ ಸಿವಿಲ್ ಜಡ್ಜ್ ನ್ಯಾಯಾಲಯವು ಅಸಲು ದಾವಾ ಸಂ : 04-97 ರಲ್ಲಿ ಶ್ರೀ ಯು. ಶ್ರೀನಿವಾಸ ಹೆಗ್ಡೆ, ರವರ ಜನ್ಮ ದಿನಾಂಕವನ್ನು ದಿನಾಂಕ 03-08-1958 ಎಂದು ತೀರ್ಪನ್ನು ನೀಡಿರುತ್ತದೆ. ಸದರಿ ತೀರ್ಪಿನ ವಿರುದ್ಧ ಚಿಕ್ಕಮಗಳೂರು ಸಿವಿಲ್ ಜಡ್ಜ್ (ಹಿ.ವಿ) ನ್ಯಾಯಾಲಯದಲ್ಲಿ ರೆಗ್ಯೂಲರ್ ಅಪೀಲ್ ಸಂ:86-97 ರಲ್ಲಿ ಸಲ್ಲಿಸಿದ್ದ ಸರ್ಕಾರದ ಮೇಲ್ಮನವಿಯ ವಿರುದ್ಧ ತೀರ್ಪನ್ನು ನೀಡಿ, ಕೆಳ ನ್ಯಾಯಾಲಯದ ತೀರ್ಪನ್ನು ಎತ್ತಿ ಹಿಡಿದಿರುತ್ತದೆ. ಆದ್ದರಿಂದ, ಶ್ರೀ ಯು. ಶ್ರೀನಿವಾಸ ಹೆಗ್ಡೆರವರ ಜನ್ಮ ದಿನಾಂಕವನ್ನು ಶಾಲಾ ದಾಖಲಾತಿಗಳಲ್ಲಿ ಇರುವಂತೆ ದಿನಾಂಕ 01-08-1955 ಎಂಬುದಕ್ಕೆ ಬದಲಾಗಿ ನ್ಯಾಯಾಲಯದ ಆದೇಶದನ್ವಯ ದಿನಾಂಕ 03-08-1958 ಎಂದು ಒಪ್ಪಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಒಇ 8 ಪಿಪಿಇ 2010, ಬೆಂಗಳೂರು, ದಿನಾಂಕ : 29–03–2010**

ಶ್ರೀ ಯು. ಶ್ರೀನಿವಾಸ ಹೆಗ್ಡೆ, ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಅಧಿಕ ಸಿ.ಜೆ. (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಂಗಳೂರುರವರ ಜನ್ಮ ದಿನಾಂಕವನ್ನು ಮೂಡಿಗೆರೆಯ ಸಿವಿಲ್ ಜಡ್ಜ್ ನ್ಯಾಯಾಲಯವು ಅಸಲು ದಾವಾ ಸಂ:04/97 ಹಾಗೂ ಚಿಕ್ಕಮಗಳೂರು ಸಿವಿಲ್ ಜಡ್ಜ್ (ಹಿ.ವಿ) ನ್ಯಾಯಾಲಯದ ರೆಗ್ಯೂಲರ್ ಅಪೀಲ್ ಸಂ: 86/97 ರಲ್ಲಿ ನೀಡಿರುವ ತೀರ್ಪಿನನ್ವಯ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋನಿರ್ಧಾರ) ಅಧಿನಿಯಮ, 1974ರ ನಿಯಮ 3ರ ಉಪನಿಯಮ 2ರನ್ವಯ ದಿನಾಂಕ 03–08–1958 (ಮೂರು–ಆಗಸ್ಟ್–ಸಾವಿರದೊಂಬೈನೂರ ಐವತ್ತೆಂಟು) ಎಂದು ಸರ್ಕಾರವು ಒಪ್ಪಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ಕೆ.ಸಿ. ಸಿದ್ದಪ್ಪ)

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 899

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಆರ್.ಬಿ. ಗುಣಕಿ, ಅಭಿಯೋಗ ಉಪ ನಿರ್ದೇಶಕರು, ದಾವಣಗೆರೆ ವಲಯ ಇವರಿಗೆ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
(1) ಸರ್ಕಾರಿ ಅಧಿಸೂಚನೆ ಸಂ : ಲಾ 51 ಪಿಪಿಇ 80, ದಿನಾಂಕ 2–4–1981
(2) ಸರ್ಕಾರಿ ಅಧಿಸೂಚನೆ ಸಂ : ಲಾ 206 ಪಿಪಿಇ 87, ದಿನಾಂಕ 23–6–1989
(3) ಸರ್ಕಾರಿ ಅಧಿಸೂಚನೆ ಸಂ : ಲಾ 111 ಪಿಪಿಇ 95, ದಿನಾಂಕ 31–5–1995
(4) ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ : ಡಿಪಿಎನ್/ಸಿಶಾ/1:98:2008–09, ದಿನಾಂಕ 13–04–2009

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 02–04–1981ರ ಸರ್ಕಾರದ ಅಧಿಸೂಚನೆ ಕ್ರ.ಸಂ.1ರನ್ವಯ ಶ್ರೀ ಆರ್.ಬಿ. ಗುಣಕಿ ಇವರು ನೇರ ನೇಮಕಾತಿ ಮೂಲಕ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕವಾಗಿ ದಿನಾಂಕ 5–4–1981 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ 23–6–1989ರ ಸರ್ಕಾರದ ಅಧಿಸೂಚನೆ ಕ್ರ.ಸಂ.3 ರನ್ವಯ ಸಹಾಯಕ ಸರ್ಕಾರಿ ಅಭಿಯೋಜಕ ವೃಂದದಿಂದ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಬಡ್ತಿ ಹೊಂದಿ ದಿನಾಂಕ 14–8–1989 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ (3)ರ ದಿನಾಂಕ 31–5–1995ರ ಸರ್ಕಾರದ ಅಧಿಸೂಚನೆ ಕ್ರ.ಸಂ.3 ರನ್ವಯ ಇವರಿಗೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರಿಂದ ಸರ್ಕಾರಿ ಅಭಿಯೋಜಕರಾಗಿ ಬಡ್ತಿ ಹೊಂದಿ, ದಿನಾಂಕ : 21–6–1995 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯು ಇದುವರೆವಿಗೂ ಕಾರ್ಯನಿರ್ವಹಿಸಿದ ಯಾವುದೇ ಹುದ್ದೆಯಲ್ಲಿ ಕಾಲಮಿತಿ ಬಡ್ತಿಯ ಆಯ್ಕೆ ಕಾಲಿಕ ವೇತನ ಶ್ರೇಣಿಯಾಗಲೀ, ಹಿರಿಯ ವೇತನ ಶ್ರೇಣಿಯ ಹಾಗೂ ಹೆಚ್ಚುವರಿ ವೇತನ ಬಡ್ತಿಯನ್ನಾಗಲೀ ಪಡೆದಿರುವುದಿಲ್ಲ. ಇವರು ಸೇವೆಗೆ ಸೇರಿದಾಗಿನಿಂದ ಇದುವರೆವಿಗೂ ಯಾವುದೇ ರೀತಿಯ ಅನಧಿಕೃತ ಗೈರು ಹಾಜರಾಗಿರುವುದಿಲ್ಲ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ/ತನಿಖೆ ಬಾಕಿ ಇರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ. ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ ದಿನಾಂಕ 1–8–2008 ಕ್ಕೆ ನಿಕಟಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ. ಆದುದರಿಂದ ಮೇಲೆ ಓದಲಾದ (4)ರ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ತಮ್ಮ ಪತ್ರದಲ್ಲಿ ಸದರಿ ಅಧಿಕಾರಿಯವರಿಗೆ ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 31 ಎಸ್‌ಆರ್‌ಪಿ 2007 (ಎಕ್ಸ್) ದಿನಾಂಕ 14–08–2008 ರನ್ವಯ ಸದರಿ ಅಧಿಕಾರಿಯವರಿಗೆ ಆಯ್ಕೆ ದರ್ಜೆ ವೇತನ ಸೌಲಭ್ಯವನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಒಇ 411 ಪಿಪಿಇ 2008, ಬೆಂಗಳೂರು, ದಿನಾಂಕ : 29–03–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಆರ್.ಬಿ. ಗುಣಕಿ, ಅಭಿಯೋಗ ಉಪ ನಿರ್ದೇಶಕರು, ದಾವಣಗೆರೆ ವಲಯ, ದಾವಣಗೆರೆ ಇವರಿಗೆ ದಿನಾಂಕ : 01–08–2008 ರಿಂದ ಅನ್ವಯವಾಗುವಂತೆ ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 31 ಎಸ್‌ಆರ್‌ಪಿ 2007 (ಎಕ್ಸ್) ದಿನಾಂಕ : 14–08–2008ರ ಅನ್ವಯ ರೂ.18150–450–19500–525–22650–600–26250–675–26925 ರಿಂದ ನಂತರದ ವೇತನ ಶ್ರೇಣಿ ರೂ. 19050–450–19500–525–22650–600–26250–675–27600 ರ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ.ಸಿ. ಸಿದ್ದಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 900

**ಒಳಾಡಳಿತ ಸಚಿವಾಲಯ**

**ವಿಷಯ:** ಕೋಲಾರ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಶ್ರೀ ಶ್ರೀನಿವಾಸ ಎಂಬುವವರ ಮರಣದ ಬಗ್ಗೆ ದಾಖಲಾಗಿರುವ ಮೊ.ಸಂ.117/08ನ್ನು ಮರು ತನಿಖೆಗಾಗಿ ಸಿ.ಐ.ಡಿಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ರಾಜ್ಯ ಮಾನವ ಹಕ್ಕುಗಳ ಆಯೋಗದ ಆದೇಶ ಸಂ.ಹೆಚ್.ಆರ್.ಸಿ.3162/08 ದಿನಾಂಕ 11.2.2010

**ಪ್ರಸ್ತಾವನೆ:**

ಶ್ರೀ ಮಾರ್ಕೋಂಡಪ್ಪ ಎಂಬುವವರು ದಿನಾಂಕ 17.9.2008 ರಂದು ಕರ್ನಾಟಕ ರಾಜ್ಯ ಮಾನವ ಹಕ್ಕುಗಳ ಆಯೋಗಕ್ಕೆ ದೂರನ್ನು ಸಲ್ಲಿಸಿ ದಿನಾಂಕ 26.4.2008ರಂದು ಮಡೇರಹಳ್ಳಿಯ ದೂರುದಾರರ ಮಗ ಶ್ರೀನಿವಾಸ ಎಂಬುವವರ ಸಾವಿಗೆ ಸಂಬಂಧಿಸಿದ ಅಪರಾಧ ಸಂ.113/08ನ್ನು ಪೊಲೀಸಿನವರು ನ್ಯಾಯ ಸಮ್ಮತವಾದ ರೀತಿಯಲ್ಲಿ ತನಿಖೆ ನಡೆಸದೇ ಇರುವುದರಿಂದ ಇದನ್ನು ಸಿ.ಐ.ಡಿಗೆ ಒಪ್ಪಿಸಬೇಕೆಂದು ಕೋರಿರುತ್ತಾರೆ.

ಸದರಿ ದೂರನ್ನು ಪರಿಶೀಲಿಸಿದ ಮಾನ್ಯ ಆಯೋಗವು ಮೇಲೆ ಓದಲಾದ ಆದೇಶದಲ್ಲಿ ದಿನಾಂಕ 26.4.2008ರಂದು ಪೊಲೀಸ್ ಬಂಧನದಿಂದ ತಪ್ಪಿಸಿಕೊಂಡ ಶ್ರೀನಿವಾಸನು ರಾಷ್ಟ್ರೀಯ ಹೆದ್ದಾರಿ ಕೋಲಾರ ಮತ್ತು ವೇಮಗಲ್ ರಸ್ತೆಯ ಗರುಡನಹಳ್ಳಿ ಗೇಟ್ ಬಳಿ ಶವವಾಗಿ ಬಿದ್ದಿದ್ದು ಆ ಬಗ್ಗೆ ಅಪರಾಧ ಸಂ.117/08 ನ್ನು ಐಪಿಸಿ ಕಲಂ279, 304(ಎ) ಅಡಿಯಲ್ಲಿ ದಾಖಲಿಸಲಾಗಿದೆಯೆಂದು ಹೇಳಲಾಗಿದೆ.

ಆದುದರಿಂದ ಕೋಲಾರ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಶ್ರೀನಿವಾಸ ಎಂಬುವವರ ಮರಣದ ಬಗ್ಗೆ ದಾಖಲಾಗಿರುವ ಮೊಕದ್ದಮೆ ಸಂ.117/08ನ್ನು ಸಿ.ಐ.ಡಿಗೆ ಮರು ತನಿಖೆಗೆ ಒಪ್ಪಿಸಲು ಮಾನ್ಯ ಆಯೋಗವು ಆದೇಶ ಮಾಡಿರುತ್ತದೆ.

ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಒಇ36 ಸಿಐಡಿ 2010, ಬೆಂಗಳೂರು, ದಿನಾಂಕ : 27.03.2010**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಶ್ರೀನಿವಾಸ ಎಂಬುವವರ ಮರಣಕ್ಕೆ ಸಂಬಂಧಿಸಿದಂತೆ ಕೋಲಾರ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ದಾಖಲಾಗಿರುವ ಅಪರಾಧ ಸಂ.117/08ನ್ನು ಮರು ತನಿಖೆಗಾಗಿ ಸಿ.ಐ.ಡಿಗೆ ವರ್ಗಾಯಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಸಿ.ಐ.ಡಿ ತಂಡಕ್ಕೆ ಹಸ್ತಾಂತರಿಸಲು ಕೋಲಾರ ಜಿಲ್ಲೆಯ ಪೊಲೀಸ್ ವರಿಷ್ಠಾಧಿಕಾರಿಗಳು ಅಗತ್ಯ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 901

**(ಪಿ.ಶಿವರಾಮ ಭಟ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಅಪರಾಧಗಳು)

**ಸಹಕಾರ ಸಚಿವಾಲಯ**

**ವಿಷಯ** : ಅಮಾನತ್ ಕೋ–ಆಪರೇಟೀವ್ ಬ್ಯಾಂಕ್ ಲಿ., ಬೆಂಗಳೂರು ಇದರ 2008–09 ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ** : ಸಹಕಾರ ಸಂಘಗಳ ಜಂಟಿ ನಿಬಂಧಕರು (ಪಟ್ಟಣ ಬ್ಯಾಂಕುಗಳ ವಿಭಾಗ) ಇವರ ಪತ್ರ ಸಂಖ್ಯೆ: ಯುಬಿಸಿ–5/ಜಿಬಿಎಂ/325/2009–10, ದಿನಾಂಕ:20.02.2010.

***

**ಪ್ರಸ್ತಾವನೆ:**

ಅಮಾನತ್ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಇದರ 2008–09ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಮಾರ್ಚಿ 31.03.2010ರವರೆಗೆ ಅವಧಿ ವಿಸ್ತರಿಸಿ ಆದೇಶವನ್ನು ನೀಡಿದ್ದು, ಸದರಿ ಬ್ಯಾಂಕಿನ ಆಡಳಿತಗಾರರು ಸದರಿ ಸಾಲಿನ ಆಡಿಟ್ ವರದಿ ಪೂರ್ಣವಾಗಿಲ್ಲವೆಂದು ಹಾಗೂ ಸಭೆಯನ್ನು ನಡೆಸಲು ಸೆಪ್ಟೆಂಬರ್ 2010ರವರೆಗೆ ಕಾಲಾವಕಾಶ ವಿಸ್ತರಿಸಿ ಅನುಮತಿ ನೀಡಲು ಕೋರಿರುತ್ತಾರೆಂದು ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಒ 35 ಸಿಎಲ್ಎಂ 2010 ಬೆಂಗಳೂರು, ದಿನಾಂಕ 20.03.2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಅಮಾನತ್ ಸಹಕಾರ ಬ್ಯಾಂಕ್ ಲಿ., ಬೆಂಗಳೂರು ಇದರ 2008–09ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ: 30.09.2010ರ ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ. ಎಂದರೆ:

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಹನ್ನೆರಡು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:**

ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:30.09.2010ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 902

**(ಆರ್.ಎಸ್.ಹುಚ್ಚಾಚಾರಿ)**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
**ಸಹಕಾರ ಇಲಾಖೆ**

**ಸಹಕಾರ ಸಚಿವಾಲಯ**

**ವಿಷಯ** : ದಿನಾಂಕ 22.03.2010ರೊಳಗೆ ನಡೆಸಬೇಕಾಗಿರುವ ತಲಕಾವೇರಿ ರೆವಿನ್ಯೂ ನೌಕರರ ಸಾಲ ಸಹಕಾರ ಸಂಘ ನಿ. ಬೆಂಗಳೂರು ಇದರ ಆಡಳಿತ ಸಮಿತಿ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ** : ಕಾರ್ಯದರ್ಶಿ, ತಲಕಾವೇರಿ ರೆವಿನ್ಯೂ ನೌಕರರ ಸಾಲ ಸಹಕಾರ ಸಂಘ ನಿ. ಇವರ ಪತ್ರ ಸಂಖ್ಯೆ: 002/09–10 ದಿನಾಂಕ 8.3.2010

***

**ಪ್ರಸ್ತಾವನೆ:**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಚುನಾವಣೆಯನ್ನು ದಿನಾಂಕ 28.03.2010ರಂದು ನಡೆಸಲು ಚುನಾವಣಾ ವೇಳಾಪಟ್ಟಿಯನ್ನು ಪ್ರಕಟಿಸಿರುವುದರಿಂದ, ಕಂದಾಯ ಇಲಾಖೆಯ ನೌಕರರು ಚುನಾವಣಾ ಪ್ರಕ್ರಿಯೆಯಲ್ಲಿ ತೊಡಗಿರುವುದರಿಂದ, ತಲಕಾವೇರಿ ರೆವಿನ್ಯೂ ನೌಕರರ ಸಾಲ ಸಹಕಾರ ಸಂಘದ ಚುನಾವಣಾ ಪ್ರಕ್ರಿಯೆಯಲ್ಲಿ ರೆವಿನ್ಯೂ

ನೌಕರರು ಪಾಲ್ಗೊಳ್ಳಲು ಸಾಧ್ಯವಾಗದಿರುವುದರಿಂದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಚುನಾವಣೆಯು ಮುಗಿದ ನಂತರ ಸಂಘದ ಚುನಾವಣೆಯನ್ನು ನಡೆಸಲು ಅನುಮತಿ ನೀಡಬೇಕೆಂದು ಸಂಘದ ಕಾರ್ಯದರ್ಶಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಒ 68 ಸಿಎಲ್ಎಂ 2010 ಬೆಂಗಳೂರು, ದಿನಾಂಕ 20.03.2010**

ಮೇಲಿನ ಪರಿಸ್ಥಿತಿಯಲ್ಲಿ ತಲಕಾವೇರಿ ರೆವಿನ್ಯೂ ನೌಕರರ ಸಾಲ ಸಹಕಾರ ಸಂಘ ನಿ. ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4),28ಎ(5), 28ಬಿ(2), 29ಎಫ್(4) ಮತ್ತು 39ಎ(2) ಅನ್ನು ಮಾರ್ಪಾಟು ಮಾಡಿ ಹಾಗೂ ಸರ್ಕಾರಿ ಆದೇಶದ ಸಂಖ್ಯೆ: ಸಿಒ 16 ಸಿಎಲ್ಎಂ 2010 ದಿನಾಂಕ: 22.01.2010 ಅನ್ನು ಭಾಗಶಃ ಮಾರ್ಪಾಡಿಸಿ ಸದರಿ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ: 31.07.2010ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ:** ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 31.07.2010 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟುಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 903

**(ಆರ್.ಎಸ್.ಹುಚ್ಚಾಚಾರಿ)**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
**ಸಹಕಾರ ಇಲಾಖೆ**

**ಶಿಕ್ಷಣ ಸಚಿವಾಲಯ**

**ವಿಷಯ:** 29-01-1992ಕ್ಕಿಂತ ಮೊದಲು ಸ್ಟಾಪ್-ಗ್ಯಾಪ್ ವ್ಯವಸ್ಥೆಯ ಆಧಾರದ ಮೇಲೆ ನೇಮಕಗೊಂಡಿರುವ ಮತ್ತು ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 21165/92 ರಲ್ಲಿ ದಿನಾಂಕ 28-09-1994ರಂದು ನೀಡಿದ ತೀರ್ಪಿಗನುಸಾರವಾಗಿ ಅವರ ಸೇವೆಗಳನ್ನು ರಾಜ್ಯ ವೇತನ ಶ್ರೇಣಿಯಲ್ಲಿ ಸಕ್ರಮಗೊಳಿಸಿರುವುದಾಗಿರುವ ಅನುದಾನಿತ ಪ್ರಥಮ ದರ್ಜೆ ಕಾಲೇಜುಗಳ ಉಪನ್ಯಾಸಕರಿಗೆ ಯುಜಿಸಿ ವೇತನ ಶ್ರೇಣಿ ನೀಡುವ ಕುರಿತು.

**ಓದಲಾಗಿದೆ** : 1) ಸರ್ಕಾರಿ ಆದೇಶ ಸಂಖ್ಯೆ : ಇಡಿ 160 ಯುಪಿಸಿ 2008 ಬೆಂಗಳೂರು, ದಿನಾಂಕ: 06-06 2009

**2)** ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಸಿಸಿಇ: 42 ಸ್ಟಾಗ್ಯಾಉ (ಕಾಕೋ) 2002 (2) ದಿನಾಂಕ: 29-09-2009

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 06-06-2009ರ ಸರ್ಕಾರಿ ಆದೇಶದಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ ಸೇವಾ ಸಕ್ರಮಾತಿಗೊಂಡ ಒಟ್ಟು436 ಸ್ಟಾಪ್ ಗ್ಯಾಪ್ ಉಪನ್ಯಾಸಕರುಗಳಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು 1996ರ ಯುಜಿಸಿ ವೇತನ ಶ್ರೇಣಿಯಲ್ಲಿ ರಾಜ್ಯ ಸರ್ಕಾರದ ನೀತಿ ನಿರ್ಧಾರದ ಅನ್ವಯ ಹಿಂದಿನ ಬಾಕಿ ವೇತನವನ್ನು ನೀಡದೆ ಸೇವಾ ಸಕ್ರಮಾತಿಗೊಳಿಸಿದ ದಿನಾಂಕದಿಂದ ಕಾಲ್ಪನಿಕವಾಗಿ ಯುಜಿಸಿ ವೇತನ ಶ್ರೇಣಿಯನ್ನು ನಿಗಧಿಪಡಿಸಲು ಹಾಗೂ ಆರ್ಥಿಕ ಸೌಲಭ್ಯಗಳನ್ನು ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ನೀಡಲು ಆದೇಶಿಸಿದೆ.

(1) ಸದರಿ ಉಪನ್ಯಾಸಕರುಗಳಿಗೆ ಸ್ಥಾನೀಕರಣಕ್ಕೆ ಅವರ ಹಿಂದಿನ ಸೇವೆ ಪರಿಗಣಿಸತಕ್ಕದ್ದಲ್ಲ ಮತ್ತು ಅವರ ಸ್ಥಾನೀಕರಣಕ್ಕೆ ಆರ್ಥಿಕ ಸೌಲಭ್ಯಗಳು ಅವರಿಗೆ ದೊರೆತ ದಿನಾಂಕದಿಂದ ಮಾತ್ರ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು.

(2) ಇನ್ನು ಮುಂದೆ ಉಪನ್ಯಾಸಕರ ಹುದ್ದೆಗಳಿಗೆ ನೇಮಕಾತಿ ಮಾಡಿಕೊಳ್ಳುವಾಗ ಅಗತ್ಯವಿರುವ ವಿದ್ಯಾರ್ಹತೆಗೆ ಸಂಬಂಧಪಟ್ಟಂತೆ ಯಜಿಸಿಯು ಗೊತ್ತುಪಡಿಸಿರುವ ಮಾರ್ಗಸೂಚಿಗಳನ್ವಯ ಮಾಡಿಕೊಳ್ಳತಕ್ಕದ್ದು.

(3) ಹಿಂದಿನ ಯಾವುದೇ ವೇತನ ಬಾಕಿಯನ್ನು ಕೇಳುವುದಿಲ್ಲವೆಂದು ಸಂಬಂಧಪಟ್ಟ ಉಪನ್ಯಾಸಕರುಗಳಿಂದ ಮುಚ್ಚಳಿಕೆ ಬರೆಸಿಕೊಳ್ಳತಕ್ಕದ್ದು.

ಮೇಲೆ (2)ರಲ್ಲಿ ಓದಲಾದ ದಿನಾಂಕ: 29-09-2009ರ ಕಾಲೇಜು ಶಿಕ್ಷಣ ಆಯುಕ್ತರ ಪ್ರಸ್ತಾವನೆಯಲ್ಲಿ ಯು.ಜಿ.ಸಿ. ವೇತನ ಶ್ರೇಣಿಯ ಸೌಲಭ್ಯ ಪಡೆಯಲು ಆದೇಶಿಸಿದ್ದ ಒಟ್ಟು 436 ಉಪನ್ಯಾಸಕರ ಪಟ್ಟಿಯಲ್ಲಿ ಬಿಟ್ಟು ಹೋಗಿರುವ ಕೆಲವು ಬೋಧಕರುಗಳ ಸಮಾನ ಪ್ರಕರಣಗಳ ದಾಖಲೆಗಳೊಂದಿಗೆ ಕ್ರೋಢೀಕೃತ 13 ಜನ ಉಪನ್ಯಾಸಕರ ಪಟ್ಟಿಯನ್ನು ಕಳುಹಿಸುತ್ತಾ, ಇವರುಗಳು ಸಹ ಈ ಹಿಂದೆ ದಿನಾಂಕ: 29-01-1992 ಕ್ಕೆ ಮುಂಚಿತವಾಗಿ ಸ್ಟಾಪ್ ಗ್ಯಾಪ್ ಉಪನ್ಯಾಸಕರುಗಳಾಗಿ ನೇಮಕಾತಿಗೊಂಡ ದಿನಾಂಕಗಳಂದು ಸ್ನಾತಕೋತ್ತರ ಪದವಿಯನ್ನು ಪರಿಗಣಿಸಿ, ಅವರುಗಳು ಸೇವೆಯಲ್ಲಿ ಸಕ್ರಮಾತಿಗೊಂಡ ದಿನಾಂಕಗಳಿಂದ ಕಾಲ್ಪನಿಕವಾಗಿ ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ವೇತನ ನಿಗಧಿಪಡಿಸಿ ದಿನಾಂಕ:06-06-2009ರಿಂದ ಅನ್ವಯವಾಗುವಂತೆ ಆರ್ಥಿಕ ಸೌಲಭ್ಯಗಳನ್ನು ನೀಡಲು ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಕರಣವನ್ನು ಉಲ್ಲೇಖಿತ ಆದೇಶ ಹಾಗೂ ಪ್ರಸ್ತಾವನೆಯನ್ನು ಸಮಗ್ರವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಇಡಿ 160 ಯುಪಿಸಿ 2008 (ಭಾಗ) ಬೆಂಗಳೂರು, ದಿನಾಂಕ 23.03.2010**

ಪ್ರಸ್ತಾವನೆಯಲ್ಲಿ ವಿರಿಸಿರುವ ಹಿನ್ನೆಲೆಯಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ ಸೇವಾ ಸಕ್ರಮಾತಿಗೊಂಡ ಸ್ಟಾಪ್ ಗ್ಯಾಪ್ ಉಪನ್ಯಾಸಕರುಗಳಿಗೆ ಯು.ಜಿ.ಸಿ ವೇತನ ಶ್ರೇಣಿಯ ಸೌಲಭ್ಯ ಪಡೆಯಲು ಆದೇಶಿಸಿದ್ದ ಒಟ್ಟು 436 ಸ್ಟಾಪ್ ಗ್ಯಾಪ್ ಉಪನ್ಯಾಸಕರ ಪಟ್ಟಿಯಲ್ಲಿ ಬಿಟ್ಟು ಹೋಗಿದ್ದ ಈ ಆದೇಶಕ್ಕೆ ಅನುಬಂಧಿಸಿರುವ 13 ಸ್ಟಾಪ್ ಗ್ಯಾಪ್ ಉಪನ್ಯಾಸಕರುಗಳಿಗೂ ಈ ಕೆಳಕಂಡ ಷರತ್ತುಗಳಿಗೊಳಪಟ್ಟು 1996ರ ಯಜಿಸಿ ವೇತನ ಶ್ರೇಣಿಯಲ್ಲಿ ರಾಜ್ಯ ಸರ್ಕಾರದ ನೀತಿ ನಿರ್ಧಾರದ ಅನ್ವಯ ಹಿಂದಿನ ಬಾಕಿ ವೇತನವನ್ನು ನೀಡದೆ ಸೇವಾ ಸಕ್ರಮಾತಿಗೊಳಿಸಿದ ದಿನಾಂಕದಿಂದ ಕಾಲ್ಪನಿಕವಾಗಿ ಯುಜಿಸಿ ವೇತನ ಶ್ರೇಣಿಯನ್ನು ನಿಗಧಿಪಡಿಸಿ ಅದರನ್ವಯ ಲಭ್ಯವಾಗುವ ಆರ್ಥಿಕ ಸೌಲಭ್ಯಗಳನ್ನು ದಿನಾಂಕ: 06-06-2009ರಿಂದ ಮಂಜೂರು ಮಾಡಲು ಆದೇಶಿಸಿದೆ.

(1) ಸದರಿ ಉಪನ್ಯಾಸಕರುಗಳಿಗೆ ಸ್ಥಾನೀಕರಣಕ್ಕೆ ಅವರ ಹಿಂದಿನ ಸೇವೆ ಪರಿಗಣಿಸತಕ್ಕದ್ದಲ್ಲ ಮತ್ತು ಅವರ ಸ್ಥಾನೀಕರಣಕ್ಕೆ ಆರ್ಥಿಕ ಸೌಲಭ್ಯಗಳು ಅವರಿಗೆ ದೊರೆತ ದಿನಾಂಕದಿಂದ ಮಾತ್ರ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು.

(2) ಇನ್ನು ಮುಂದೆ ಉಪನ್ಯಾಸಕರ ಹುದ್ದೆಗಳಿಗೆ ನೇಮಕಾತಿ ಮಾಡಿಕೊಳ್ಳುವಾಗ ಅಗತ್ಯವಿರುವ ವಿದ್ಯಾರ್ಹತೆಗೆ ಸಂಬಂಧಪಟ್ಟಂತೆ ಯಜಿಸಿಯು ಗೊತ್ತುಪಡಿಸಿರುವ ಮಾರ್ಗಸೂಚಿಗಳನ್ವಯ ಮಾಡಿಕೊಳ್ಳತಕ್ಕದ್ದು.

(3) ಹಿಂದಿನ ಯಾವುದೇ ವೇತನ ಬಾಕಿಯನ್ನು ಕೇಳುವುದಿಲ್ಲವೆಂದು ಸಂಬಂಧಪಟ್ಟ ಉಪನ್ಯಾಸಕರುಗಳಿಂದ ಮುಚ್ಚಳಿಕೆ ಬರೆಸಿಕೊಳ್ಳತಕ್ಕದ್ದು.

(4)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎಸ್.ಎಂ. ನಂದಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
**ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)**

**ಸರ್ಕಾರದ ಆದೇಶ ಸಂಖ್ಯೆ ಇಡಿ 160 ಯುಪಿಸಿ 2008 (ಭಾಗ), ದಿನಾಂಕ 23.03.2010ಕ್ಕೆ ಅನುಬಂಧ**

| ಕ್ರ ಸಂ | ಹೆಸರು ಮತ್ತು ಕಾರ್ಯ ನಿರ್ವಹಿಸುತ್ತಿರುವ ಕಾಲೇಜು |
|---|---|
| 1 | ವೆಂಕಟೇಶ್. ಕೆ.ಟಿ., ಇತಿಹಾಸ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೆ.ಆರ್. ನಗರ |
| 2 | ಮಹದೇವಸ್ವಾಮಿ. ಸಿ.ಪಿ. ಭೂಗೋಳಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೆ.ಆರ್.ನಗರ |
| 3 | ರಾಮಕೃಷ್ಣ ನಾಯಕ್, ಸಸ್ಯಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕೆ.ಆರ್.ನಗರ |
| 4 | ಕೃಷ್ಣಕಾರಂತ.ಕೆ. ರಸಾಯನಶಾಸ್ತ್ರ ಉಪನ್ಯಾಸಕರು, ವಿವೇಕಾನಂದ ಕಾಲೇಜು, ಪುತ್ತೂರು |
| 5 | ಸುಗಂದ ವಿ.ನಾಯಕ್, ತರ್ಕಶಾಸ್ತ್ರ ಉಪನ್ಯಾಸಕರು, ಗೋಖಲೆ ಸೆಂಟಿನರಿ ಕಾಲೇಜು, ಅಂಕೋಲ |

| | |
|---|---|
| 6 | ಶಾಂತಪ್ಪ ರಾಮು ಶಿರೋಡ್ಕರ್, ಪ್ರಾಣಿಶಾಸ್ತ್ರ ಉಪನ್ಯಾಸಕರು, ಗೋಖಲೆ ಸೆಂಟಿನರಿ ಕಾಲೇಜು, ಅಂಕೋಲ |
| 7 | ಲೋಕೇಶ್. ಎಸ್.ಹೆಗ್ಗಡೆ, ಇಂಗ್ಲೀಷ್ ಉಪನ್ಯಾಸಕರು, ಡಾ: ಎ.ವಿ. ಬಾಳಿಗಾ ಕಾಲೇಜು, ಕುಮಟ |
| 8 | ಸತ್ಯನಾರಾಯಣ, ವಾಣಿಜ್ಯ ಶಾಸ್ತ್ರ ಉಪನ್ಯಾಸಕರು, ಎಸ್.ಎಸ್.ಆರ್.ಜಿ. ಕಾಲೇಜು, ರಾಯಚೂರು |
| 9 | ಅಮರೇಶ್ ಬಿ.ಹಿರೇಮಠ, ಸಸ್ಯಶಾಸ್ತ್ರ ಉಪನ್ಯಾಸಕರು, ಶರಣಬಸವೇಶ್ವರ ವಿಜ್ಞಾನ ಕಾಲೇಜು, ಗುಲ್ಬರ್ಗಾ |
| 10 | ಲಿಲಾ ಜಿ.ಸನಕಳ್ಳಿ, ಹಿಂದಿ ಉಪನ್ಯಾಸಕರು, ಎಸ್.ಎಸ್.ಕೆ.ಬಿ. ಕಾಲೇಜು, ಬಸವಕಲ್ಯಾಣ |
| 11 | ಸುರೇಂದ್ರರೆಡ್ಡಿ, ರಸಾಯನಶಾಸ್ತ್ರ ಉಪನ್ಯಾಸಕರು, ಪಿ.ಇ.ಎಸ್.ಕಾಲೇಜು, ಬೆಂಗಳೂರು |
| 12 | ಸೋಮಶೇಖರಪ್ಪ.ಜಿ.ಪಿ. ರಸಾಯನಶಾಸ್ತ್ರ ಉಪನ್ಯಾಸಕರು, ಕಲ್ಪತರು ಪ್ರಥಮ ದರ್ಜೆ ವಿಜ್ಞಾನ ಕಾಲೇಜು, ತಿಪಟೂರು |
| 13 | ಥಾಮಸ್ ಪ್ರಾನ್ಸಿಸ್, ಭೌತಶಾಸ್ತ್ರ ಉಪನ್ಯಾಸಕರು, ಸಿದ್ದಗಂಗಾ ಮಹಿಳಾ ಕಾಲೇಜು, ತುಮಕೂರು |

**(ಎಸ್.ಎಂ. ನಂದಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
**ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)**

ಪಿ.ಆರ್. **904**

**ವಸತಿ ಸಚಿವಾಲಯ**

**ವಿಷಯ** : ಸುರಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ** : (1) ಸರ್ಕಾರದ ಆದೇಶ ಸಂ.ವಇ /42/ಹೆಚ್ಎಂ/1999, ದಿನಾಂಕ:10.05.2000.

(2) ಸರ್ಕಾರದ ಆದೇಶ ಸಂ.ವಇ /18/ ಹೆಚ್ಎಸ್/2008, ದಿನಾಂಕ: 16.09.2009.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1) ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2) ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಸುರಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ ವಇ 57 ಹೆಚ್ಎಸ್ 2009 ಬೆಂಗಳೂರು, ದಿನಾಂಕ 29.ನೇ ಮಾರ್ಚ್, 2010**

ಸುರಪುರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಮಂಜುನಾಥ್ ನಾಯಕ ಬಿನ್ ವಿಶ್ವನಾಥ ನಾಯಕ, ಸುರಪುರ | ಪರಿಶಿಷ್ಟ ಪಂಗಡ |
| 2 | ಶ್ರೀ ಅಮೀನರೆಡ್ಡಿ ಬಿನ್ ಮಲ್ಲನಗೌಡ ಪಾಟೀಲ್, ಸುರಪುರ | ಸಾಮಾನ್ಯ |
| 3 | ಶ್ರೀ ಇಸ್ಮಾಯಿಲ್ ಬಿನ್ ಗುಲಾಮಸಾಬ್ ಬಳಚಕ್ರ, ರಂಗಪೇಟೆ | ಅಲ್ಪಸಂಖ್ಯಾತ |
| 4 | ಶ್ರೀಮತಿ ಸರಸ್ವತಿ ಕೋಂ ರಂಗಯ್ಯಶೆಟ್ಟಿ, ಸಾ// ರಂಗಪೇಟೆ | ಬಿಸಿಎಂ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**(ಕೆ. ಆರ್. ವಲ್ಲೂರ)**
**ಪೀಠಾಧಿಕಾರಿ–2 ವಸತಿ ಇಲಾಖೆ**

ಪಿ.ಆರ್. 905

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** 2007-08ನೇ ಸಾಲಿನಲ್ಲಿ ಕಬ್ಬು ಬೆಳೆದ ರೈತರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು-2008-09ನೇ ಸಾಲಿನಲ್ಲಿ ಸಕ್ಕರೆ ಕಾರ್ಖಾನೆಗಳು ಸರ್ಕಾರಕ್ಕೆ ಪಾವತಿಸಬೇಕಾದ ಕಬ್ಬು ಖರೀದಿ ತೆರಿಗೆಯನ್ನು ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಐ 19 ಎಸ್‌ಜಿಎಫ್ 2008(ಭಾ-2), ದಿನಾಂಕ : 12-03-2008.
2. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರುರವರ ಟಿಪ್ಪಣಿ ದಿನಾಂಕ : 04-08-2008.
3. ವಾಣಿಜ್ಯ ತೆರಿಗೆ, ಅಪರ ಆಯುಕ್ತರು, (ಜಾಗೃತಿ) ಬೆಂಗಳೂರು ರವರ ಪತ್ರ ಸಂಖ್ಯೆ : ಆರ್‌ಎಫ್‌ಡಿ/ಸಿಆರ್-15/09-10 ದಿನಾಂಕ : 21-01-2010.

**ಪ್ರಸ್ತಾವನೆ :**

ಮೇಲೆ ಓದಲಾದ(1)ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು 2007-08ನೇ ಸಾಲಿನ ಹಂಗಾಮಿಗೆ ಸಂಬಂಧಿಸಿದಂತೆ ದಿನಾಂಕ : 31-03-2007ರ ಅಂತ್ಯಕ್ಕೆ 12 ತಿಂಗಳು ಮೀರಿ ಪಕ್ವವಾದ ಎಲ್ಲಾ ಕಬ್ಬನ್ನು ಕಾರ್ಖಾನೆಗಳು ನುರಿಸಬೇಕೆಂದು ಆದೇಶಿಸುತ್ತಾ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಈ ಕೆಳಕಂಡ ಸಹಾಯಧನ ಸೌಲಭ್ಯವನ್ನು ರಾಜ್ಯ ಸರ್ಕಾರವು ನೀಡಿದೆ.

1. 2006-07ನೇ ಸಾಲಿನಲ್ಲಿ ವಿಸ್ತರಿಸಿದ ಅವಧಿಯ ನಂತರವು ಅಂದರೆ 01-06-2007 ರಿಂದ 31-07-2007ರ ನಡುವಿನ ಅವಧಿಯಲ್ಲಿ ನುರಿಸಿದ ಕಬ್ಬಿಗೆ ರೂ. 8.75 ಕೋಟಿ ರೂ.ಗಳ ಸಹಾಯಧನ.
2. ದಿನಾಂಕ : 01-04-2008ರಿಂದ ದಿನಾಂಕ : 31-07-2008ರವರೆಗೆ ವಿಸ್ತರಿಸಿದ ಅವಧಿಯಲ್ಲಿ ಕಾರ್ಖಾನೆಗಳಲ್ಲಿ ನುರಿಸಲಾದ ಕಬ್ಬಿಗೆ ಪ್ರತಿ ಮೆಟ್ರಿಕ್ ಟನ್‌ಗೆ ರೂ. 100/-ನಂತೆ ಸಹಾಯಧನ.
3. 30 ಕಿ.ಮೀ. ಮೀರಿದ ದೂರದಿಂದ ಸಾಗಾಣಿಕೆ ಮಾಡಿದ ಕಬ್ಬಿಗೆ ಪ್ರತಿ ಟನ್‌ಗೆ/ಪ್ರತಿ ಕಿ,ಮೀ.ಗೆ ರೂ. 2/-ರಂತೆ ಸಾಗಾಣಿಕೆ ಸಹಾಯಧನ, ಈ ಸಾಗಾಣಿಕೆ ಸಹಾಯಧನ ಆದೇಶದ ದಿನಾಂಕದಿಂದ ಅನ್ವಯವಾಗಲಿದೆ.
4. ರಾಜ್ಯದ ಸಕ್ಕರೆ ಕಾರ್ಖಾನೆಗಳು ರಫ್ತು ಮಾಡಲಾದ ಸಕ್ಕರೆಗೆ ಪ್ರತಿ ಕ್ವಿಂಟಲ್‌ಗೆ ರೂ.100/-ರಂತೆ ರಫ್ತು ಸಹಾಯಧನ. ಈ ಸಹಾಯಧನವು ಆದೇಶದ ದಿನಾಂಕದಿಂದ ಕೇಂದ್ರ ಸರ್ಕಾರವು ರಫ್ತು ಸಹಾಯಧನ ನೀಡುವ ಅವಧಿಯ ದಿನಾಂಕದವರೆಗೆ ಮಾತ್ರ ಜಾರಿಯಲ್ಲಿರುತ್ತದೆ. ಈ ಸಹಾಯಧನವನ್ನು 10 ಕೋಟಿ ರೂ.ಗಳಿಗೆ ಸೀಮಿತಗೊಳಿಸಲಾಗಿದೆ.
5. ದಿನಾಂಕ : 01-04-2008ರಿಂದ 31-07-2008ರವರೆಗೆ ಕಾರ್ಖಾನೆಗಳು ಪಾವತಿಸಬೇಕಾದ ಕಬ್ಬು ಖರೀದಿ ತೆರಿಗೆಯನ್ನು ಮನ್ನಾ ಮಾಡಲಾಗಿದೆ.
6. ಮೊಲಾಸಸ್ ಸಾಗಾಣಿಕೆಗೆ ವಿಧಿಸಲಾಗಿದ್ದ ನಿಯಂತ್ರಣವನ್ನು ಸಡಿಲಗೊಳಿಸಲಾಗಿದೆ.

ಮೇಲೆ ಓದಲಾದ (1)ರಲ್ಲಿರುವ ದಿನಾಂಕ : 12-03-2008ರ ಆದೇಶದಲ್ಲಿ ಹಲವಾರು ಸಹಾಯಧನ, ಸೌಲಭ್ಯ/ರಿಯಾಯತಿಗಳನ್ನು ನೀಡಲಾಗುವುದೆಂದು ತಿಳಿಸಿದ್ದಾಗ್ಯೂ ರಾಜ್ಯದ ಸಕ್ಕರೆ ಕಾರ್ಖಾನೆಗಳು ರೈತರ ಕಬ್ಬಿಗೆ ಸೂಕ್ತ ಬೆಲೆ ನೀಡುವುದಕ್ಕೆ ಮುಂದೆ ಬಂದಿರುವುದಿಲ್ಲ. ಈ ಹಿನ್ನೆಲೆಯಲ್ಲಿ ದಿನಾಂಕ : 14-07-2008ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ರೈತ ಮುಖಂಡರು ಹಾಗೂ ಸಕ್ಕರೆ ಕಾರ್ಖಾನೆಗಳ ಮಾಲೀಕರೊಂದಿಗೆ ಸಭೆ ನಡೆದಿದ್ದು ಸದರಿ ಸಭೆಯಲ್ಲಿ ಸಕ್ಕರೆ ಕಾರ್ಖಾನೆಗಳು ರೈತರ ಕಬ್ಬಿಗೆ ಪ್ರತಿ ಟನ್‌ಗೆ ಎಸ್‌ಎಂಪಿ ಮೇಲೆ ಹೆಚ್ಚುವರಿ 160/-ರೂಗಳನ್ನು ನೀಡಲು ಹಲವಾರು ತೊಂದರೆಗಳಿರುವುದನ್ನು ವಿವರಿಸಿ ಹೆಚ್ಚುವರಿ ಪಾವತಿಸಲು ತಿಳಿಸಿರುವ 160/-ರೂ.ಗಳಲ್ಲಿ 100/-ರೂಗಳನ್ನು ದಿನಾಂಕ : 31-12-2008ರೊಳಗೆ ಪಾವತಿಸುವುದಾಗಿ ಉಳಿಕೆ 60/-ರೂ.ಗಳನ್ನು ಪಾವತಿಸಲು ಬರುವ ಹಂಗಾಮಿನಲ್ಲಿ ಅಂದರೆ 2008-09ನೇ ಸಾಲಿನಲ್ಲಿ ಸರ್ಕಾರವು ಕಬ್ಬು ಖರೀದಿ ತೆರಿಗೆ ಪಾವತಿಗೆ ವಿನಾಯತಿ ನೀಡುವಂತೆ ಕೋರಿರುತ್ತವೆ.

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿರವರ ಟಿಪ್ಪಣಿಯಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು ಎಸ್‌ಎಂಪಿ ಮೇಲೆ ಹೆಚ್ಚುವರಿಯಾಗಿ ಪ್ರತಿ ಟನ್ ಕಬ್ಬಿಗೆ 160/-ರೂ.ಗಳನ್ನು ಪಾವತಿಸುವ ಬಗ್ಗೆ ತಿಳಿಸುತ್ತಾ ಇದರಲ್ಲಿ 100/-ರೂ.ಗಳನ್ನು ಈಗಾಗಲೇ ಸರ್ಕಾರ ದಿನಾಂಕ : 12-03-2008ರ ಆದೇಶದಲ್ಲಿ ನೀಡಿರುವ ರಯಾಯತಿಗಳನ್ನು ಉಪಯೋಗಿಸಿಕೊಂಡು ಪಾವತಿಸಬಹುದಾಗಿದ್ದು, ಬಾಕಿ ಉಳಿದ 60/-ರೂ.ಗಳ ಬಗ್ಗೆ ಮುಂದಿನ ಸಾಲಿನ ಕಬ್ಬು ಖರೀದಿ

ತೆರಿಗೆಯನ್ನು ಹೊಂದಾಣಿಕೆ ಮಾಡಿಕೊಳ್ಳಲು ಅಥವಾ ಬಡ್ಡಿ ರಹಿತ ಸಾಲ ಮಂಜೂರು ಮಾಡುವ ಬಗ್ಗೆ ಸರ್ಕಾರದ ಹಂತದಲ್ಲಿ ಕ್ರಮ ತೆಗೆದುಕೊಳ್ಳಲು ಕೋರಿರುತ್ತಾರೆ.

2007-08ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ನಿಗಧಿಪಡಿಸಿದ ಶಾಸನಬದ್ಧ ಕನಿಷ್ಠ ದರದ ಮೇಲೆ ಹೆಚ್ಚುವರಿಯಾಗಿ ಪ್ರತಿ ಟನ್ ಕಬ್ಬಿಗೆ 160/-ರೂ.ಗಳನ್ನು ಈ ಕೆಳಕಂಡ 12 ಸಕ್ಕರೆ ಕಾರ್ಖಾನೆಗಳು ಪಾವತಿ ಮಾಡಿದ್ದು, ಕಾರ್ಖಾನೆಗಳು ಕಬ್ಬು ಸರಬರಾಜು ಮಾಡಿದ ರೈತರಿಗೆ ಹಣ ಪಾವತಿಸಲು ಅನುಕೂಲವಾಗುವ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಕಂಡ ಕಾರ್ಖಾನೆಗಳು 2008-09ನೇ ಸಾಲಿನಲ್ಲಿ ಸರ್ಕಾರಕ್ಕೆ ಪಾವತಿಸಬೇಕಾದ ಕಬ್ಬು ಖರೀದಿ ತೆರಿಗೆಯನ್ನು ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಲು ಉದ್ದೇಶಿಸಲಾಗಿದೆ.

(ರೂ.ಗಳಲ್ಲಿ)

| ಕ್ರಮ ಸಂಖ್ಯೆ | ಕಾರ್ಖಾನೆ ಹೆಸರು | ಪರಿವರ್ತಿಸಲಾದ ಕಬ್ಬು ಖರೀದಿ ತೆರಿಗೆ ಮೊತ್ತ |
|---|---|---|
| 1. | ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ | 38,48,144 |
| 2. | ಮೈಸೂರು ಪೇಪರ್ ಮಿಲ್ಸ್ ಸಕ್ಕರೆ ಕಾರ್ಖಾನೆ, ಭದ್ರಾವತಿ | 62,01,056 |
| 3. | ಶ್ರೀ ಶ್ರೀರಾಮ ಸ.ಸ.ಕಾ. (ಅಂಬಿಕಾ ಶುಗರ್ಸ್ (ಲಿ)ರವರು ಗುತ್ತಿಗೆ ಪಡೆದಿದ್ದಾರೆ) ಚುಂಚನಕಟ್ಟೆ, ಮೈಸೂರು ಜಿಲ್ಲೆ | 46,03,797 |
| 4. | ಶ್ರೀ ರೇಣುಕಾ ಶುಗರ್ಸ್ (ಲಿ) ಮನೋಳಿ, ಬೆಳಗಾಂ ಜಿಲ್ಲೆ | 5,58,00,252 |
| 5. | ಎನ್.ಎಸ್.ಎಲ್. ಶುಗರ್ಸ್ (ಲಿ) ಕೊಪ್ಪ, ಮಂಡ್ಯ ಜಿಲ್ಲೆ | 2,50,96,734 |
| 6. | ಬೀಳಗಿ ಶುಗರ್ಸ್ ಲಿ., ಬಾಡಗಂಡಿ, ಬಾಗಲಕೋಟೆ ಜಿಲ್ಲೆ | 86,15,642 |
| 7. | ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ, ಎಂ.ಕೆ. ಹುಬ್ಬಳ್ಳಿ, ಬೆಳಗಾಂ ಜಿಲ್ಲೆ | 1,17,64,430 |
| 8. | ಶ್ರೀ ರೇಣುಕಾ ಶುಗರ್ಸ್ (ಲಿ) ಬುರ್ಲಟ್ಟಿ, ಬೆಳಗಾಂ ಜಿಲ್ಲೆ | 5,84,22,942 |
| 9. | ಶ್ರೀ ಸೋಮೇಶ್ವರ ಸ.ಸ.ಕಾರ್ಖಾನೆ, ಸಿದ್ಧಸಮುದ್ರ, ಬೆಳಗಾಂ ಜಿಲ್ಲೆ | 87,15,583 |
| 10. | ಶ್ರೀ ರೇಣುಕಾ ಶುಗರ್ಸ್ (ಲಿ) ಹವಲಗಾ, ಗುಲ್ಬರ್ಗಾ ಜಿಲ್ಲೆ | 2,18,27,455 |
| 11. | ಶ್ರೀ ಹಿರಣ್ಯಕೇಶಿ ಸ.ಸ.ಕಾ, ಸಂಕೇಶ್ವರ, ಬೆಳಗಾಂ ಜಿಲ್ಲೆ | 1,79,27,383 |
| 12. | ಶ್ರೀ ವಿಶ್ವನಾಥ ಶುಗರ್ಸ್ (ಲಿ) ಬೆಲ್ಲದ ಬಾಗೇವಾಡಿ, ಬೆಳಗಾಂ ಜಿಲ್ಲೆ | 1,63,54,893 |
| | ಒಟ್ಟು | 23,91,78,311 |

**ಸರ್ಕಾರದ ಆದೇಶ ಸಂಖ್ಯೆ : ಸಿಐ 151 ಎಸ್‌ಜಿಎಫ್ 2008(ಭಾ-1), ದಿನಾಂಕ : 30-03-2010**

2007-08ನೇ ಸಾಲಿನಲ್ಲಿ ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಕೇಂದ್ರ ಸರ್ಕಾರ ನಿಗದಿಪಡಿಸಿದ ಶಾಸನಬದ್ಧ ಕನಿಷ್ಠ ದರದ ಮೇಲೆ ಪ್ರತಿ ಟನ್ ಕಬ್ಬಿಗೆ ಹೆಚ್ಚುವರಿ 160/-ರೂ.ಗಳನ್ನು ಪ್ರಸ್ತಾವನೆಯಲ್ಲಿ ಕಾಣಿಸಿರುವ 12 ಸಕ್ಕರೆ ಕಾರ್ಖಾನೆಗಳು ಪಾವತಿಸಿದ್ದು, ಮೇಲೆ ಓದಲಾದ (3)ರಲ್ಲಿರುವ ವಾಣಿಜ್ಯ ತೆರಿಗೆ ಅಪರ ಆಯುಕ್ತರು ರವರ ಪತ್ರದ ಸೂಚನೆಯಂತೆ ಪ್ರಸ್ತಾವನೆಯಲ್ಲಿನ ಕ್ರ.ಸಂಖ್ಯೆ (4)ರಲ್ಲಿರುವ ಶ್ರೀ ರೇಣುಕಾ ಶುಗರ್ಸ್ ಲಿ., ಮನೋಳಿ, ಬೆಳಗಾಂ ಜಿಲ್ಲೆ ಈ ಕಾರ್ಖಾನೆಯನ್ನು ಹೊರತುಪಡಿಸಿ ಈ ಕೆಳಕಂಡ 11 ಸಕ್ಕರೆ ಕಾರ್ಖಾನೆಗಳಿಗೆ ಮಾತ್ರ 2008-09ನೇ ಸಾಲಿನಲ್ಲಿ ಈ ಕಾರ್ಖಾನೆಗಳು ಸರ್ಕಾರಕ್ಕೆ ಪಾವತಿಸಬೇಕಾದ ಕಬ್ಬು ಖರೀದಿ ತೆರಿಗೆಯನ್ನು ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಲಾಗಿದ್ದು, ಪರಿವರ್ತಿಸಲಾದ ಕಬ್ಬು ಖರೀದಿ ತೆರಿಗೆಯನ್ನು ಈ ಕಾರ್ಖಾನೆಗಳು ಮುಂದಿನ 3 ವರ್ಷಗಳ ಅವಧಿಯಲ್ಲಿ ಸರ್ಕಾರಕ್ಕೆ ಮರುಪಾವತಿ ಮಾಡಬೇಕೆಂದು ನಿರ್ಧರಿಸಿ ಹಾಗೂ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಲಾಗಿದೆ.

(ರೂ.ಗಳಲ್ಲಿ)

| ಕ್ರಮ ಸಂಖ್ಯೆ | ಕಾರ್ಖಾನೆ ಹೆಸರು | ಪರಿವರ್ತಿಸಲಾದ ಕಬ್ಬು ಖರೀದಿ ತೆರಿಗೆ ಮೊತ್ತ |
|---|---|---|
| 1. | ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ | 38,48,144 |
| 2. | ಮೈಸೂರು ಪೇಪರ್ ಮಿಲ್ಸ್ ಸಕ್ಕರೆ ಕಾರ್ಖಾನೆ, ಭದ್ರಾವತಿ | 62,01,056 |
| 3. | ಶ್ರೀ ಶ್ರೀರಾಮ ಸ.ಸ.ಕಾ. (ಅಂಬಿಕಾ ಶುಗರ್ಸ್ (ಲಿ)ರವರು ಗುತ್ತಿಗೆ ಪಡೆದಿದ್ದಾರೆ) ಚುಂಚನಕಟ್ಟೆ, ಮೈಸೂರು ಜಿಲ್ಲೆ | 46,03,797 |
| 4. | ಎನ್.ಎಸ್.ಎಲ್. ಶುಗರ್ಸ್ (ಲಿ) ಕೊಪ್ಪ, ಮಂಡ್ಯ ಜಿಲ್ಲೆ | 2,50,96,734 |
| 5. | ಬೀಳಗಿ ಶುಗರ್ಸ್ ಲಿ., ಬಾಡಗಂಡಿ, ಬಾಗಲಕೋಟೆ ಜಿಲ್ಲೆ | 86,15,642 |
| 6. | ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ, ಎಂ.ಕೆ. ಹುಬ್ಬಳ್ಳಿ, ಬೆಳಗಾಂ ಜಿಲ್ಲೆ | 1,17,64,430 |
| 7. | ಶ್ರೀ ರೇಣುಕಾ ಶುಗರ್ಸ್ (ಲಿ) ಬುರ್ಲಟ್ಟಿ, ಬೆಳಗಾಂ ಜಿಲ್ಲೆ | 5,84,22,942 |
| 8. | ಶ್ರೀ ಸೋಮೇಶ್ವರ ಸ.ಸ.ಕಾರ್ಖಾನೆ, ಸಿದ್ದಸಮುದ್ರ, ಬೆಳಗಾಂ ಜಿಲ್ಲೆ | 87,15,583 |
| 9. | ಶ್ರೀ ರೇಣುಕಾ ಶುಗರ್ಸ್ (ಲಿ) ಹವಲಗಾ, ಗುಲ್ಬರ್ಗಾ ಜಿಲ್ಲೆ | 2,18,27,455 |
| 10. | ಶ್ರೀ ಹಿರಣ್ಯಕೇಶಿ ಸ.ಸ.ಕಾ, ಸಂಕೇಶ್ವರ, ಬೆಳಗಾಂ ಜಿಲ್ಲೆ | 1,79,27,383 |
| 11. | ಶ್ರೀ ವಿಶ್ವನಾಥ ಶುಗರ್ಸ್ (ಲಿ) ಬೆಲ್ಲದ ಬಾಗೇವಾಡಿ, ಬೆಳಗಾಂ ಜಿಲ್ಲೆ | 1,63,54,893 |
| | ಒಟ್ಟು | 18,33,78,059 |

ಪುಸ್ತಕ ಹೊಂದಾಣಿಕೆ ಮೊತ್ತ 18,33,78,059/– ರೂ.ಗಳನ್ನು ಲೆಕ್ಕ ಶೀರ್ಷಿಕೆ 6852–02–190–4–02–394 Loan (NP) State Renewal Fund (VRS & other reliefs) ನಿಂದ ಲೆಕ್ಕ ಶೀರ್ಷಿಕೆ 6860–04–190–1–16–394 (Plan) Conversion of Purchase Tax into interest free loan (Plan)ಗೆ ಮರುಹೊಂದಾಣಿಕೆ ಮಾಡಲಾಗಿದ್ದು, 2009–10ನೇ ಸಾಲಿನ ಲೆಕ್ಕಗಳಲ್ಲಿ ಮಹಾಲೇಖಪಾಲರು (ಹಕ್ಕು ಮತ್ತು ರಹದಾರಿ) ರವರು ಲೆಕ್ಕ ಹೊಂದಾಣಿಕೆಯನ್ನು ಮಾಡುವರು.

## ಷರತ್ತುಗಳು

1. ಪರಿವರ್ತಿಸಲಾದ ಬಡ್ಡಿ ರಹಿತ ಸಾಲವು ಕಬ್ಬು ಖರೀದಿ ತೆರಿಗೆ ಮೊತ್ತಕ್ಕೆ ಮಾತ್ರ ಸೀಮಿತವಾಗಿದ್ದು, ಇದರಲ್ಲಿ ರಸ್ತೆ ಕರವನ್ನು ಒಳಗೊಂಡಿರುವುದಿಲ್ಲ.
2. 2008–09ನೇ ಸಾಲಿನ ಕಬ್ಬು ನುರಿಸುವ ಹಂಗಾಮಿನಲ್ಲಿ ಕಾರ್ಖಾನೆಗಳು ಖರೀದಿಸಿದ ಕಬ್ಬಿಗೆ ಕಬ್ಬು ಖರೀದಿ ತೆರಿಗೆ ಬಾಬ್ತು ಮೊತ್ತವನ್ನು ಸಾಲವಾಗಿ ಪರಿವರ್ತಿಸುವ ಆಧಾರದ ಮೇಲೆ ನಿಗದಿಪಡಿಸಿದೆ. 2008–09 ಅಥವಾ 2007–08ನೇ ಸಾಲಿಗೆ ಸಂಬಂಧಿಸಿದಂತೆ ಇದರಲ್ಲಿ ಯಾವುದು ಕಡಿಮೆಯೋ ಅದನ್ನು ಪರಿಗಣಿಸುವುದು.
3. 2008–09ನೇ ಸಾಲಿನ ಕಬ್ಬು ನುರಿಸುವ ಹಂಗಾಮು 30–06–09ರವರೆಗೆ ಇದ್ದು, 2008–09ನೇ ಸಾಲಿನ ಅವಧಿಯನ್ನು ದಿನಾಂಕ 30–06–09ರವರೆಗೆ ನುರಿಸುವ ಹಂಗಾಮಿಗೆ ಪರಿವರ್ತಿಸಲಾದ ಸಾಲದ ಅವಧಿ ಎಂದು ಪರಿಗಣಿಸಲಾಗಿದೆ.
4. ಪರಿವರ್ತಿಸಲಾದ ಕಬ್ಬು ಖರೀದಿ ತೆರಿಗೆಯನ್ನು ಕಾರ್ಖಾನೆಗಳು 2009–10ನೇ ಸಾಲಿನಿಂದ 3 ವಾರ್ಷಿಕ ಸಮಾನ ಕಂತುಗಳಲ್ಲಿ ಮರುಪಾವತಿಸುವುದು.
5. 2008–09ನೇ ಸಾಲಿನಲ್ಲಿ ಕಬ್ಬು ಖರೀದಿ ತೆರಿಗೆ ಜೊತೆಗೆ ರಸ್ತೆ ಕರ ಪಾವತಿಸುವುದು ಬಾಕಿ ಉಳಿದಿದ್ದಲ್ಲಿ ಬಾಕಿ ಉಳಿದಿರುವ ರಸ್ತೆ ಕರವನ್ನು ಕೂಡಲೆ ಪಾವತಿಸುವುದು.
6. 2009–10ನೇ ಸಾಲಿನಿಂದ 3 ಸಮಾನ ಕಂತುಗಳಲ್ಲಿ ಮರುಪಾವತಿ ಮಾಡಲಾಗದ ಕಾರ್ಖಾನೆಗಳಿಗೆ ನಿಯಮಾನುಸಾರ ದಂಡ ಬಡ್ಡಿಯನ್ನು ವಿಧಿಸಿ ಭೂಕಂದಾಯ ಬಾಕಿಯಂತೆ ವಸೂಲಾತಿಗೆ ಕ್ರಮ ವಹಿಸಲಾಗುವುದು.

7. 2008–09ನೇ ಸಾಲಿಗೆ ಬಡ್ಡಿ ರಹಿತ ಸಾಲ ಸೌಲಭ್ಯ ಪಡೆದ ಕಾರ್ಖಾನೆಗಳಿಂದ ಸಾಲದ ಮೊತ್ತವನ್ನು ಮರುಪಾವತಿ ಮಾಡಿಕೊಳ್ಳುವ ಕ್ರಮವನ್ನು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಮತ್ತು ವಾಣಿಜ್ಯ ತೆರಿಗೆ ಆಯುಕ್ತರು ಪ್ರತ್ಯೇಕ ಖಾತೆಗಳನ್ನು ತೆರೆದು ನಿರ್ವಹಿಸುವುದು.

8. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರು ಕಬ್ಬು ಖರೀದಿ ತೆರಿಗೆಯನ್ನು ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಲಾಗಿರುವ ಮೊತ್ತಕ್ಕೆ ಕಾರ್ಖಾನೆಗಳಿಂದ ಒಪ್ಪಂದ ಪತ್ರಗಳನ್ನು ಪಡೆದುಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 1530 ವೆಚ್ಚ 1/2008 ದಿನಾಂಕ 15–09–2009ರ, ಎಫ್‌ಡಿ 1573 ವೆಚ್ಚ 1/2009 ದಿನಾಂಕ 28–10–2009, ಎಫ್‌ಡಿ 97 ವೆಚ್ಚ 1/10 ದಿನಾಂಕ 01–03–2010 ಮತ್ತು ಆದೇಶ ಸಂಖ್ಯೆ : ಎಫ್‌ಡಿ 474 ಬಿಆರ್‌ಎಸ್ 2009 ದಿನಾಂಕ 26–03–2010ರಲ್ಲಿ ನೀಡಲಾದ ಸಹಮತಿಗಳಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 947

**ಪಿ. ಆನಂದ್‌ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀ ವೈ.ಆರ್. ಅಗಡಿ, ಹಿರಿಯ ಭೂವಿಜ್ಞಾನಿ (ಅಮಾನತ್ತು) ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಬಾಕಿಯಿರಿಸಿ, ಅಮಾನತ್ತು ತೆರವುಗೊಳಿಸುವ ಕುರಿತು.

**ಓದಲಾಗಿದೆ :**
1. ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಪತ್ರ ಸಂಖ್ಯೆ : ಗಭೂಇ/ಸಿಬ್ಬಂದಿ–ಅ : ಡಿಡಿಎಸ್ : 2009–10 : 1615, ದಿನಾಂಕ : 20–08–2009.
2. ದಿ : 05–09–09ರ ಸರ್ಕಾರಿ ಆದೇಶ ಸಂಖ್ಯೆ : ಸಿಐ 114 ಎಂಜಿಎಸ್ 2009.
3. ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಪತ್ರ ಸಂಖ್ಯೆ : ಗಭೂಇ/ಸಿಬ್ಬಂದಿ–ಅ1/ಹಿಭೂಇ : ಬಡ್ತಿ : 09–10 : 3194 ದಿನಾಂಕ : 11–11–2009.

**ಪ್ರಸ್ತಾವನೆ :**

ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ (1)ರಲ್ಲಿ ಓದಲಾದ ದಿ : 07–01–2009ರ ಪತ್ರದಲ್ಲಿ ಗುಲ್ಬರ್ಗಾ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಕಛೇರಿಯಲ್ಲಿ ಹಿರಿಯ ಭೂವಿಜ್ಞಾನಿ, ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ವೈ.ಆರ್. ಅಗಡಿ, ಇವರು ಕರ್ತವ್ಯ ನಿರ್ಲಕ್ಷ್ಯತೆಯನ್ನು ತೋರಿಸಿ, ತಮ್ಮ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು ಮತ್ತು ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟಾಗಲು ಕಾರಣಕರ್ತರಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಇವರನ್ನು ಅಮಾನತ್ತುಗೊಳಿಸಲು ಶಿಫಾರಸ್ಸು ಮಾಡಿದ್ದರ ಮೇರೆಗೆ, ಮೇಲೆ (2)ರಲ್ಲಿ ಓದಲಾದ ದಿ : 19–01–09ರ ಸರ್ಕಾರಿ ಆದೇಶದಲ್ಲಿ ಶ್ರೀ ವೈ.ಆರ್. ಅಗಡಿ, ಹಿರಿಯ ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಗುಲ್ಬರ್ಗಾ ಇವರನ್ನು, ಇವರ ವಿರುದ್ಧದ ಆರೋಪಗಳ ಕುರಿತು ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ) ಪ್ರಕಾರ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಸೇವೆಯಿಂದ ಅಮಾನಗೊಳಿಸಿತ್ತು.

ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ (3)ರಲ್ಲಿ ಓದಲಾದ ದಿ : 29–08–2009ರ ಅರೆ ಸರ್ಕಾರಿ ಪತ್ರದಲ್ಲಿ, ಶ್ರೀ ವೈ.ಆರ್. ಅಗಡಿ, ಹಿರಿಯ ಭೂವಿಜ್ಞಾನಿ (ಅಮಾನತ್ತು), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸಿ ಉಪನಿರ್ದೇಶಕರು, ಕಾರವಾರ, ಇಲ್ಲಿಗೆ ನಿಯುಕ್ತಿಗೊಳಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 47 ಎಂಜಿಎಸ್ 2007, ಬೆಂಗಳೂರು, ದಿನಾಂಕ : 31ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇರೆಗೆ, ಶ್ರೀ ವೈ.ಆರ್. ಅಗಡಿ, ಹಿರಿಯ ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ವಿರುದ್ಧದ ಆರೋಪಗಳ ಕುರಿತು ನಿಯಮಾನುಸಾರ ವಿಚಾರಣೆಯನ್ನು ಕಾಯ್ದಿರಿಸಿ, ಅಮಾನತ್ತನ್ನು ತೆರವುಗೊಳಿಸಿದೆ.

ಅಮಾನತ್ತು ತೆರವುಗೊಳಿಸಿದ ನಂತರ ಶ್ರೀ ವೈ.ಆರ್. ಅಗಡಿ, ಹಿರಿಯ ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರನ್ನು ಹಿರಿಯ ಭೂವಿಜ್ಞಾನಿ, ಅಂತರ್ಜಲ, ಗುಲ್ಬರ್ಗಾ, ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿ ಆದೇಶಿಸಿದೆ.

ಶ್ರೀ ವೈ.ಆರ್. ಅಗಡಿ, ಇವರ ಸೇರಕೆ ಕಾಲ, ಪ್ರಯಾಣಭತ್ಯೆ ಮತ್ತು ಇತರೆ ಭತ್ಯೆಗಳನ್ನು ಪಡೆಯಲು ಅರ್ಹರಾಗಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 949

**ಎ.ಪಿ. ರಾಮಕೃಷ್ಣ**
ಪೀಠಾಧಿಕಾರಿ (ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀ ಎಂ.ಜೆ. ಶಶಿಧರ್, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಶಿಕಾರಿಪುರ, ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**

1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಅಧಿಕೃತ ಜ್ಞಾಪನ ಸಂಖ್ಯೆ : ಸಿಬ್ಬಂದಿ 1 (8)/ಪಮೂಅ/112/2003–04, ದಿನಾಂಕ 10–10–2005.
2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಅಧಿಕೃತ ಜ್ಞಾಪನ ಸಂಖ್ಯೆ : ಸಿಬ್ಬಂದಿ 1 (8)/ಪಮೂಅ/112/2003–04, ದಿನಾಂಕ 24–07–2009.
3. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ : ಸಿಬ್ಬಂದಿ 1 (8)/ಪಮೂಅ/112/2003–04, ದಿನಾಂಕ 24–07–2009

**ಪ್ರಸ್ತಾವನೆ :**

ಶ್ರೀ ಎಂ.ಜೆ. ಶಶಿಧರ್, ರೇಷ್ಮೆ ಪ್ರದರ್ಶಕರು, ಪ್ರಸ್ತುತ ತಾಂತ್ರಿಕ ಸೇವಾ ಕೇಂದ್ರ, ಶಕಾರಿಪುರ, ಇವರು ದಿನಾಂಕ : 7–2–1983ರಲ್ಲಿ ರೇಷ್ಮೆ ಪ್ರದರ್ಶಕರ ಹುದ್ದೆಗೆ ಕಾರ್ಯವರದಿ ಮಾಡಿಕೊಂಡಿರುತ್ತಾರೆ. ನೌಕರರು 2 ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗದ ಕಾರಣ ಇವರ ಪರಿವೀಕ್ಷಣಾ ಅವಧಿಯು ಘೋಷಣೆಯಾಗಿರುವುದಿಲ್ಲ. ನೌಕರರು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದ ಪ್ರಯುಕ್ತ ರೇಷ್ಮೆ ಆಯುಕ್ತರು ಮೇಲೆ ಓದಲಾದ ಕ್ರಮಸಂಖ್ಯೆ (1)ರ ಅಧಿಕೃತ ಜ್ಞಾಪನದಲ್ಲಿ ನೌಕರರನ್ನು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 5(1)(ಬಿ) ರನ್ವಯ ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸಿ ಆದೇಶಿಸಿದ್ದು, ಈ ಆದೇಶವು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 6(1)ರ ರೀತ್ಯಾ ಸರ್ಕಾರದ ಸ್ಥಿರೀಕರಣಕ್ಕೆ ಒಳಪಟ್ಟಿದ್ದು, ಸದರಿ ಸ್ಥಿರೀಕರಣದ ನಂತರ ಜಾರಿಗೆ ಬರತಕ್ಕದೆಂದು ಆದೇಶಿಸಿರುತ್ತಾರೆ. ಸರ್ಕಾರದಿಂದ ಈ ಬಗ್ಗೆ ಸ್ಥಿರೀಕರಣವಾಗದೇ ಸದರಿ ನೌಕರರು ಸೇವೆಯಲ್ಲಿ ಮುಂದುವರೆದಿದ್ದು, ನಿಗದಿತ ಇಲಾಖಾ ಪರೀಕ್ಷೆಯನ್ನು ದಿನಾಂಕ : 2–8–2007 ರಂದು ಪಾಸು ಮಾಡಿಕೊಂಡಿರುತ್ತಾರೆ. ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಂಡ ನಂತರ ನೌಕರರು ತಮ್ಮ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ ಘೋಷಣೆ ಮಾಡುವಂತೆ ಕೋರಿರುತ್ತಾರೆ. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮೇಲೆ ಓದಲಾದ ಕ್ರಮಸಂಖ್ಯೆ (2)ರ ಅಧಿಕೃತ ಜ್ಞಾಪನದಲ್ಲಿ ನೌಕರರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 4(1)(ii)ರನ್ವಯ ದಿನಾಂಕ : 7–2–1985 ರಿಂದ 6–2–1986 ರವರೆಗೆ ವಿಸ್ತರಿಸಿ ಆದೇಶಿಸಿರುತ್ತಾರೆ. ನೌಕರರು ದಿನಾಂಕ : 2–8–2007 ರಂದು ನಿಗದಿತ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವುದರಿಂದ ನೌಕರರ ಪರಿವೀಕ್ಷಣಾ ಅವಧಿಯನ್ನು ದಿನಾಂಕ : 2–8–2007ರವರೆಗೆ ವಿಸ್ತರಿಸಬೇಕಾಗಿದ್ದು, ಈ ನೌಕರರ ವಿರುದ್ಧ ಯಾವುದೇ ಶಿಸ್ತು ಪ್ರಕರಣ ಇರುವುದಿಲ್ಲ. ವೇತನ ರಹಿತ ರಜೆ/ಅಸಾಧಾರಣ ರಜೆ ಉಪಯೋಗಿಸಿಕೊಂಡಿರುವುದಿಲ್ಲ. ಮೇಲಾಧಿಕಾರಿಗಳ ವರದಿಯಂತೆ ತೃಪ್ತಿಕರವಾಗಿ ಕಾರ್ಯನಿರ್ವಹಿಸುತ್ತಾರೆ. ಆದ್ದರಿಂದ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ : 7–2–1986 ರಿಂದ 2–8–2007 ರವರೆಗೆ ವಿಸ್ತರಿಸಿ ಆದೇಶಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ರೇಷ್ಮೆ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ. ಶ್ರೀ ಎಂ.ಜೆ. ಶಶಿಧರ್, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಶಿಕಾರಿಪುರ ಇವರು ದಿನಾಂಕ : 7-2-1983 ರಂದು ಕಾರ್ಯವರದಿ ಮಾಡಿಕೊಂಡಿದ್ದು, ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಳ್ಳದ ಕಾರಣ ಸೇವೆಯಿಂದ ವಿಮುಕ್ತಿಗೊಳಿಸಲಾಗಿತ್ತು ಮತ್ತು ಸದರಿ ಆದೇಶವನ್ನು ಸ್ಥಿರೀಕರಿಸುವಂತೆ ಕೋರಲಾಗಿತ್ತು. ಈ ಮಧ್ಯೆ ನೌಕರರು ಬಾಕಿ ಇದ್ದ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಂಡಿದ್ದರಿಂದ ರೇಷ್ಮೆ ಇಲಾಖೆಯು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 4(1) (ii)ರನ್ವಯ ದಿನಾಂಕ : 7-2-1985 ರಿಂದ 6-2-1986ರವರೆಗಿನ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದೆ. ಶ್ರೀ ಎಂ.ಜೆ. ಶಶಿಧರ್, ರೇಷ್ಮೆ ಪ್ರದರ್ಶಕರು, ಇವರು ಸೇವೆಯಲ್ಲಿ ಮುಂದುವರೆದಿದ್ದು, ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸುಮಾಡಿಕೊಂಡಿರುವುದರಿಂದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಶಿಫಾರಸ್ಸು ಮಾಡಿರುವಂತೆ ಇವರ ಪ್ರಕರಣದಲ್ಲಿ ಇವರು ಇಲಾಖಾ ಪರೀಕ್ಷೆಯನ್ನು ಪಾಸು ಮಾಡಿಕೊಂಡ ದಿನಾಂಕದವರೆಗೆ ಅಂದರೆ ದಿನಾಂಕ : 7-2-1986 ರಿಂದ 2-8-2007ರವರೆಗೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 83 ರೇಇವಿ 2009, ಬೆಂಗಳೂರು, ದಿನಾಂಕ : 24-03-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎಂ. ಜೆ. ಶಶಿಧರ್, ರೇಷ್ಮೆ ಪ್ರದರ್ಶಕರು, ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 4(1)(ii)ರನ್ವಯ ದಿನಾಂಕ : 7-2-1986 ರಿಂದ ದಿನಾಂಕ : 2-8-2007 ರವರೆಗೆ ವಿಸ್ತರಿಸಿದೆ.

ನೌಕರರನ್ನು ಸೇವೆಯಿಂದ ವಿಮುಕ್ತಿಗೊಳಿಸಿ ಇಲಾಖೆಯು ಹೊರಡಿಸಿರುವ ಅಧಿಕೃತ ಜ್ಞಾಪನ ಸಂಖ್ಯೆ : ಸಿಬ್ಬಂದಿ 1(8)/ಪಪೂಅ/112/2003-04, ದಿನಾಂಕ : 10-10-2005ನ್ನು ಹಿಂದಕ್ಕೆ ಪಡೆಯುವುದು.

ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದ ಅವಧಿಗೆ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಅದನ್ನು ಘೋಷಿಸಿದ ನಂತರ ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸಬಹುದು. ಆದರೆ, ವೇತನ ಬಾಕಿಯನ್ನು ನೀಡುವಂತಿಲ್ಲ, ಈ ವಿಷಯದಲ್ಲಿ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 10 ರಂತೆ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 950

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ಸಂಖ್ಯೆ : ಸಿಐ/352/ಎಸ್‌ಪಿಐ/2008(ಪಿ), ಬೆಂಗಳೂರು, ದಿನಾಂಕ : 27-03-2010**

## ತಿದ್ದುಪಡಿ ಆದೇಶ

ಸರ್ಕಾರದ ಆದೇಶ ಸಂಖ್ಯೆ : ಸಿಐ/352/ಎಸ್‌ಪಿಐ/2008(ಪಿ), ಬೆಂಗಳೂರು, ದಿನಾಂಕ : 23-03-2010ರ ಪ್ರಸ್ತಾವನೆ ಹಾಗೂ ಆದೇಶದ ಭಾಗದಲ್ಲಿ ಲೆಕ್ಕಶೀರ್ಷಿಕೆ 4851-00-800-5-00-132 (ಸಾಮಾನ್ಯ) ಇದರ ಬದಲಾಗಿ ಲೆಕ್ಕಶೀರ್ಷಿಕೆ 4851-00-800-5-00-132 (SCP &TSP) ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 951

**ಅಪರ್ಣ ಪಾವಟೆ**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀ ನಂಜುಂಡಸ್ವಾಮಿ, ಹಿರಿಯ ಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಿಜಾಪುರ, ಇವರನ್ನು ಅಮಾನತ್ತಿನಲ್ಲಿಡುವ ಕುರಿತು.

**ಓದಲಾಗಿದೆ :** ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಪತ್ರ ಸಂಖ್ಯೆ : ಗಭೂಇ/ಸಿಬ್ಬಂದಿ-ಅ-3/ಅಮಾನತ್ತು/2009-10/4836.

**ಪ್ರಸ್ತಾವನೆ :**

ಶ್ರೀ ನಂಜುಂಡಸ್ವಾಮಿ, ಹಿರಿಯ ಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಿಜಾಪುರ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ, ಅನಧಿಕೃತ ಮರಳು ಸಾಗಾಣಿಕೆ ನಿಯಂತ್ರಣಕ್ಕೆ ಪೊಲೀಸ್ ಹಾಗೂ ಕಂದಾಯ

ಇಲಾಖೆಗಳ ಸಹಕಾರವನ್ನು ಒದಗಿಸಲಾಗಿದ್ದರೂ ಸಹ ಅನಧಿಕೃತ ಮರಳು ಸಾಗಾಣಿಕೆ/ಗಣಿಗಾರಿಕೆಯನ್ನು ತಡೆಗಟ್ಟುವಲ್ಲಿ ವಿಫಲರಾಗಿರುತ್ತಾರೆಂದು ಹಾಗೂ ಕೇಂದ್ರಸ್ಥಾನದಲ್ಲಿ ಉಪಸ್ಥಿತರಿರದೇ, ಕೇಂದ್ರಸ್ಥಾನವನ್ನು ಬಿಡುವಾಗ ಮೇಲಾಧಿಕಾರಿಗಳ ಅನುಮತಿಯನ್ನು ಪಡೆಯದೇ ಕರ್ತವ್ಯಲೋಪ ಎಸಗಿದ್ದು, ಸದರಿ ಅಧಿಕಾರಿಯು ಕೇಂದ್ರಸ್ಥಾನದಲ್ಲಿ ವಾಸ್ತವ್ಯವಿಲ್ಲದೇ ಇರುವುದರಿಂದ, ಬಿಜಾಪುರದ ಜಿಲ್ಲಾ ವ್ಯಾಪ್ತಿಯಿಂದ ಹೊರರಾಜ್ಯಗಳಿಗೆ ಅನಧಿಕೃತ ಮರಳು ಸಾಗಾಣಿಕೆ ನಿರಂತರವಾಗಿ ಮುಂದುವರೆದಿದ್ದು, ಇದರಿಂದಾಗಿ ರಾಜ್ಯದ ಬೊಕ್ಕಸಕ್ಕೆ ಭಾರೀ ನಷ್ಟವುಂಟು ಮಾಡಿರುತ್ತಾರೆಂದು ತಿಳಿಸುತ್ತಾ, ಇದು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ, 1966ರ ನಿಯಮ 3(iii)ರ ಸ್ಪಷ್ಟ ಉಲ್ಲಂಘನೆಯಾಗಿರುವುದರಿಂದ ತಕ್ಷಣವೇ ಈ ಅಧಿಕಾರಿಯನ್ನು ಸೇವೆಯಿಂದ ಅಮಾನತ್ತುಗೊಳಿಸಲು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ ಓದಲಾದ (1)ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ :

**ಸರ್ಕಾರದ ಆದೇಶ ಸಂಖ್ಯೆ : ಸಿಐ 24 ಎಂಜಿಎಸ್ 2010, ಬೆಂಗಳೂರು, ದಿನಾಂಕ : 27ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇರೆಗೆ, ಶ್ರೀ ನಂಜುಂಡಸ್ವಾಮಿ, ಹಿರಿಯ ಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಿಜಾಪುರ, ಇವರ ವಿರುದ್ಧದ ಆರೋಪಗಳ ಕುರಿತು ವಿಚಾರಣೆಯನ್ನು ಕಾಯ್ದಿರಿಸಿ, ಈ ಅಧಿಕಾರಿಯನ್ನು ಕರ್ನಾಟಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ)ರ ಪ್ರಕಾರ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ನಂಜುಂಡಸ್ವಾಮಿ, ಹಿರಿಯ ಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಿಜಾಪುರ, ಇವರು ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ನಂಜುಂಡಸ್ವಾಮಿ, ಹಿರಿಯ ಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಿಜಾಪುರ, ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಿಯವರ ಲಿಖಿತ ಅನುಮತಿ ಪಡೆಯದೆ ಕೇಂದ್ರ ಕಾರ್ಯಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 952

**ಎ. ಪಿ. ರಾಮಕೃಷ್ಣ**
ಪೀಠಾಧಿಕಾರಿ (ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ENERGY SECRETARIAT

**Sub :-** Purchase of power from Co-Generation Sugar Factories for the short term from April 2010 to June 2010.

**Read :-** Cabinet decision dated 29-03-2010.

**Preamble:**

1. Karnataka State has been reeling under acute power shortage for sometime. The State has faced severe power shortage in the year 2008-2009 as there was huge gap between demand-supply in the State. To protect the interest of consumers, Government decided to purchase power from various sources available including from Co-generation Sugar Factories in 2008-09. This matter was brought before the Cabinet Meeting held on 27-11-2008. As a result, 762.81 MU of power was purchased at the cost of Rs. 505.31 Crores from Co-generation Sugar Factories during the period from December 2008 May 2009.
2. The State has faced a severe power deficit situation even in 2009-10 and the adverse energy deficit is likely to continue till June 2010. In order to overcome the severe demand supply gap for the coming summer months, action has been initiated to purchase power from Independent Power Producers (IPPs) and other sources, keeping in view the public interest.
3. A meeting has been held on 08-03-2010 under the chairmanship of Hon'ble Chief Minister to review the issues pertaining to supply of power through Co-generation Sugar Factories in the State for the coming summer months Hon'ble Chief Minister suggested that a group of officers consisting of the Additional Chief Secretary(Finance), Additonal Chief Secretary (Energy) Managing Director, KPTCL, the Managing Directors of the five Distribution Companies (BESCOM, MESCOM, HESCOM, CESC, GESCOM) and Secretary, Commerce

and Industries Department to have discussions with the representatives of the Sugar Factories and to assess :

a. What power can be made available for the period from March 2010 to June 2010 and
b. To arrive at a realistic rate along with the terms of payment ;

4. Accordingly, detailed discussions were held on 08-03-2010 with the representatives of the Sugar Factories, particularly with M/s South India Sugar Mills Association (SISMA) and the Federation of Sugar Factories by the group of officers mentioned above. In the said meeting four subjects were discussed in detail, which include-
   a. The quantity of power available on monthly basis from the sugar factories
   b. The period for which the power will have to be procured
   c. The rates for procurement
   d. The requirements to be fulfilled to ensure supply of power

5. In the above meeting, **the representatives of the Sugar Factories indicated that the availability of bagasse is already very low and further generation of power by Sugar Factories would be possible only through utilization of imported coal.** This imported coal has a gross calorific value of 5500 Kcal to be sourced from Indonesia and South Africa. With this parameter and at the rate of Rs. 4500 per tone being the landed cost, the direct material cost of coal for every unit of power will be Rs. 4.50 per unit.
6. The Commissioner of Cane Development who was present in the meeting informed that **"owing to absolute shortage of bagasse, it would not be possible to generate power from bagasse and the use of coal becomes inevitable."**
7. After detailed discussions, the quantity of power available from various sugar factories (both Co-operative and Private) was pegged at about 250 MWs.
8. After detailed discussions, the cost per unit of power was agreed as follows (using coal imported instead of Bagasse) ;

| | | | | |
|---|---|---|---|---|
| a. | March | 2010 | - | Rs. 5.25 per unit |
| b. | April | 2010 | - | Rs. 5.50 per unit |
| c. | May | 2010 | - | Rs. 5.50 per unit |
| d. | June | 2010 | - | Rs. 5.00 per unit |

9. The 250 MWs indicated as firm supply of power include both (a) Units without Power Purchase Agreement (b) Units under PPA. In respect of Units with PPA, it will be necessary to file an application before the KERC outilining the circumstances in which this short term arrangement has been devised and the background leading to use of coal instead of bagasse. On this basis, for PPA holders, the KERC would be moved for approving the force-majeure clause, the substitution of coal for bagasse in the generation of power and the cost at which power will be procured for March 15th –June 30th 2010. The rates indicated above are subject to the approval of the Karnataka Electricity Regulatory Commission (KERC).
10. Based on the above discussions, group of Officers have furnished a Report i.e., Proceedings of the Meeting held on 08-03-2010 and the same has been approved by the Hon'ble Chief Minister.
11. The proposal to purchase power for the short term in view of the critical power shortage in the State and the need to augment short term capacity from Co-generation Sugar Factories units was placed before the State Cabinet on 29-03-2010, and based on the approval of the Cabinet, the following order is issued.

**GOVERNMENT ORDER NO. EN 29 EEB 2010, BANGALORE, DATED 1ST APRIL 2010.**

1. Under the circumstances explained above, Government are pleased to accord approval to purchase power as short-term arrangement for the period from April to June 2010 from Co-generation Sugar Factories as under :

a. To purchase power from Co-generation power from Sugar Plants for the units who do not have Power Purchase Agreement with Electiricity Supply Companies at the rate mentioned below :

| | | | |
|---|---|---|---|
| a. | April 2010 | - | Rs. 5.50 per unit |
| b | May 2010 | - | Rs. 5.50 per unit |
| c | June 2010 | - | Rs. 5.00 per unit |

b. For the units with Power Purchase Agreement.

Based on the report of the Commissioner of Cane Development, force majeure be declared to keep the Power Purchase Agreements under suspension for the short term procurement period from 29th march to 30th june 2010 and based on calculation of cost of generation of power using coal in place of bagasse, to file an application by Electricity Supply Companies before Karnataka Electricity Regulatory Commission for approving the force majeure clause and for power purchase at the above mentioned rates/period, subject to approval by Karnataka Electricity Regulatory Commission.

c. On behalf of ESCOMs, Managing Director, Karnataka Power Transmission Corporation Limited (KPTCL) is authorized to file the applications with the Karnataka Electricity Regulatory Commission (KERC) on the basis of requisite documents.

2. The above rate are provisional and is subject to approval of Karnataka Electricity Regulatory Commission (KERC). All State Electricity Supply Companies (ESCOMs) shall submit a Memorandum on the circumstances warranting higher price and need of the State to procure power from Co-generation before the Karnataka Electricity Regulatory Commission (KERC) immediately.

**3.** This order shall come into immediate effect and the above rates will be in force till **30th June 2010 or until further orders whichever is earlier.**

By Order and in the name of the Governor of Karnataka

**S.J. Sampath Kumar**
Under Secretary to Government
Energy Department

PR NO. 953

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಬೆಂಗಳೂರಿನಲ್ಲಿ ಕರ್ನಾಟಕ ಇತಿಹಾಸ ಸಂಸ್ಕೃತಿ ಮತ್ತು ಪರಂಪರೆ ಬಿಂಬಿಸುವಂತಹ ವಸ್ತು ಸಂಗ್ರಹಾಲಯ ಸ್ಥಾಪನೆ–ಜಮೀನು ಮಂಜೂರಿಗೆ ಹಣ ಬಿಡುಗಡೆ.

**ಓದಲಾಗಿದೆ :**
1. ಸರ್ಕಾರದ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ 21–08–2008ರ ಸಭೆಯ ನಡವಳಿಗಳು.
2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಇವರ ಪತ್ರ ಸಂಖ್ಯೆ ಡಿಎಎಂ/ಪವಸ/2008–09, ದಿನಾಂಕ 15–09–2008.
3. ಸರ್ಕಾರದ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆ ಇವರ ಪತ್ರ ಸಂಖ್ಯೆ : ಕಸಂವಾ 261/ಕಾ/2009, ದಿನಾಂಕ 09–07–2009.
4. ಸರ್ಕರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ 20–07–2009 ರಂದು ನಡೆದ ಸಭೆಯ ನಡವಳಿಗಳು.
5. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಇವರ ಪತ್ರ ಸಂಖ್ಯೆ ಡಿಎಎಂ/ಎಸಿಟಿ.6/ಪ್ರವಸ/2008–09, ದಿನಾಂಕ 29–03–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 21–08–2008ರ ಸಭೆಯ ನಡವಳಿಗಳಲ್ಲಿ ಬೆಂಗಳೂರಿನಲ್ಲಿ ಕರ್ನಾಟಕ ಇತಿಹಾಸ ಸಂಸ್ಕೃತಿ ಮತ್ತು ಪರಂಪರೆ ಬಿಂಬಿಸುವಂತಹ ವಸ್ತು ಸಂಗ್ರಹಾಲಯ ಸ್ಥಾಪಿಸುವ ಬಗ್ಗೆ ಡಾಃ ಆರ್. ಗೋಪಾಲ್, ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರಿಗೆ ಮುಂಬೈ, ಕಲ್ಕತ್ತಾ, ದೆಹಲಿ ಬೋಪಾಲ್ ಮತ್ತು ಇತರೆ

ಸ್ಥಳಗಳಲ್ಲಿರುವ ರಾಷ್ಟ್ರೀಯ ವಸ್ತು ಸಂಗ್ರಹಾಲಯವನ್ನು ವೀಕ್ಷಿಸಿ ಅದರಲ್ಲಿರುವ ವೈಜ್ಞಾನಿಕ ಮತ್ತು ಐತಿಹಾಸಿಕವಾದಂತಹ ಸ್ಮಾರಕ ಧ್ವನಿ ಮತ್ತು ಶ್ರವಣ ವ್ಯವಸ್ಥೆ ಇರುವ ವಸ್ತು ಪ್ರದರ್ಶನಗಳ ಬಗ್ಗೆ ಅಧ್ಯಯನ ನಡೆಸಿ ವರದಿ ನೀಡುವಂತೆ ತಿಳಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ 15-09-2008ರ ಪತ್ರದಲ್ಲಿ ನಿರ್ದೇಶಕರು ದೇಶದ ವಿವಿಧ ವಸ್ತು ಸಂಗ್ರಹಾಲಯಗಳಿಗೆ ಭೇಟಿ ನೀಡಿ ಕರ್ನಾಟಕ ಪರಂಪರೆ ವಸ್ತು ಸಂಗ್ರಹಾಲಯದ ಸ್ವರೂಪ ಮತ್ತು ರೂಪುರೇಷೆಗಳ ಕುರಿತು ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ 09-07-2009ರ ಪತ್ರದಲ್ಲಿ ಸರ್ಕಾರದ ಕಾರ್ಯದರ್ಶಿಗಳು, ಆಯುಕ್ತರು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಪತ್ರ ಬರೆದು ಪಾರಂಪರಿಕ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಲು ಬೆಂಗಳೂರಿನಲ್ಲಿ 2 ಎಕರೆ ಜಮೀನನ್ನು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಗೆ ಮಂಜೂರು ಮಾಡಲು ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ 20-07-2009ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಹಾಗೂ ನಿರ್ದೇಶಕರು ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಈ ವಸ್ತು ಸಂಗ್ರಹಾಲಯವನ್ನು ನಿರ್ಮಿಸುವ ಕುರಿತು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದೊಂದಿಗೆ ಸಂಪರ್ಕಿಸಿ ಸೂಕ್ತವಾದ ಸ್ಥಳವನ್ನು ಗುರ್ತಿಸಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲು ನಿರ್ಧರಿಸಲಾಯಿತು.

ಮೇಲೆ (5)ರಲ್ಲಿ ಓದಲಾದ ದಿನಾಂಕ 29-03-2010ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಇವರು ಪ್ರಸ್ತಾವನೆ ಸಲ್ಲಿಸಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು, ಬೆಂಗಳೂರಿನಲ್ಲಿ ಕರ್ನಾಟಕದ ಇತಿಹಾಸ, ಸಂಸ್ಕೃತಿ ಮತ್ತು ಪರಂಪರೆ ಬಿಂಬಿಸುವ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಲು ಸರ್.ಎಂ. ವಿಶ್ವೇಶ್ವರಯ್ಯ ಬಡಾವಣೆಯಲ್ಲಿ ಸಿ.ಎ. ನಿವೇಶನ ಸಂಖ್ಯೆ 12ನ್ನು ಹಂಚಿಕೆ ಮಾಡಲು ಒಪ್ಪಿದೆಯೆಂದು ತಿಳಿಸಿರುತ್ತಾರೆ. ಅಲ್ಲದೇ ಸದರಿ ನಿವೇಶನವು 4040.55 ಚ.ಮೀ. ವಿಸ್ತೀರ್ಣ ಹೊಂದಿದ್ದು ಅದರ ಒಟ್ಟು ಗುತ್ತಿಗೆ ಮೌಲ್ಯ ರೂ. 1,01,23,497/- (ಒಂದು ಕೋಟಿ ಒಂದು ಲಕ್ಷ ಇಪ್ಪತ್ಮೂರು ಸಾವಿರದ ನಾಲ್ಕುನೂರ ತೊಂಬತ್ತೇಳು ಮಾತ್ರ) ಆಗುತ್ತದೆ ಎಂದು ತಿಳಿಸಿರುವರು. ಅಲ್ಲದೇ ವಸ್ತು ಸಂಗ್ರಾಹಾಲಯ ಸ್ಥಾಪಿಸಲು 2009-10ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2205-00-103-0-025 (ಯೋಜನೆ) 059- ಇತರೆ ಖರ್ಚು ಅಡಿಯಲ್ಲಿ ರೂ. 300.00 ಲಕ್ಷ ಅನುದಾನವನ್ನು (ಪರಿಷ್ಕೃತ ಅನುದಾನ ರೂ. 150.00 ಲಕ್ಷ) ಒದಗಿಸಲಾಗಿದೆ ಎಂದು ತಿಳಿಸಿ ತಾಳೆಪಟ್ಟಿಯೊಂದಿಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ರೂ. 1,01,23,497/- (ಒಂದು ಕೋಟಿ ಒಂದು ಲಕ್ಷ ಇಪ್ಪತ್ಮೂರು ಸಾವಿರದ ನಾಲ್ಕುನೂರ ತೊಂಬತ್ತೇಳು ಮಾತ್ರ) ಗಳನ್ನು ಸಂದಾಯ ಮಾಡಲು ಸರ್ಕಾರದ ಮಂಜೂರಾತಿ ಆದೇಶ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಆರ್ಥಿಕ ವರ್ಷದ ಅಂತ್ಯದಲ್ಲಿರುವುದರಿಂದ ಇದನ್ನು ಅತ್ಯಂತ ಜರೂರು ಎಂದು ಭಾವಿಸಿ ಬೆಂಗಳೂರಿನಲ್ಲಿ ಕರ್ನಾಟಕ ಇತಿಹಾಸ ಸಂಸ್ಕೃತಿ ಮತ್ತು ಪರಂಪರೆ ಬಿಂಬಿಸುವಂತಹ ವಸ್ತು ಸಂಗ್ರಹಾಲಯ ಸ್ಥಾಪಿಸಲು ಬೆಂಗಳೂರಿನ ಸರ್.ಎಂ. ವಿಶ್ವೇಶ್ವರಯ್ಯ ಬಡಾವಣೆಯಲ್ಲಿ ಸಿ.ಎ. ನಿವೇಶನ ಸಂಖ್ಯೆ 12ಕ್ಕೆ ರೂ. 1,01,23,497/- (ಒಂದು ಕೋಟಿ ಒಂದು ಲಕ್ಷ ಇಪ್ಪತ್ಮೂರು ಸಾವಿರದ ನಾಲ್ಕುನೂರ ತೊಂಬತ್ತೇಳು ಮಾತ್ರ) ಗುತ್ತಿಗೆ ಮೌಲ್ಯವಾಗಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಸಂದಾಯ ಮಾಡಲು ಸರ್ಕಾರ ಮಂಜೂರಾತಿ ನೀಡಲು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ,

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 135 ಕೆಎಂಯು 2009, ಬೆಂಗಳೂರು, ದಿನಾಂಕ : 30-03-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು, ಬೆಂಗಳೂರಿನಲ್ಲಿ ಕರ್ನಾಟಕ ಇತಿಹಾಸ ಸಂಸ್ಕೃತಿ ಮತ್ತು ಪರಂಪರೆ ಬಿಂಬಿಸುವಂತಹ ವಸ್ತು ಸಂಗ್ರಹಾಲಯ ಸ್ಥಾಪಿಸಲು ಬೆಂಗಳೂರಿನ ಸರ್.ಎಂ. ವಿಶ್ವೇಶ್ವರಯ್ಯ ಬಡಾವಣೆಯಲ್ಲಿ ಸಿ.ಎ. ನಿವೇಶನ ಸಂಖ್ಯೆ 12ನ್ನು ಹಂಚಿಕೆ ಮಾಡಿದ್ದಕ್ಕೆ ಅದರ ಗುತ್ತಿಗೆ ಮೌಲ್ಯ ರೂ. 1,01,23,497/- (ಒಂದು ಕೋಟಿ ಒಂದು ಲಕ್ಷ ಇಪ್ಪತ್ಮೂರು ಸಾವಿರದ ನಾಲ್ಕುನೂರ ತೊಂಬತ್ತೇಳು ಮಾತ್ರ) ಹಣವನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಸಂದಾಯ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

ಸದರಿ ವೆಚ್ಚವನ್ನು 2009-10ನೇ ಸಾಲಿನ ಲೆಕ್ಕಶೀರ್ಷಿಕೆ 2205-00-103-0-025 (ಯೋಜನೆ) 059- ಇತರೆ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 30-03-2010ರ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಶಿಇ 745 ಐಎಫ್(ಬಿ&ಎ) 2010ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 964

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು
ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## FOREST, ECOLOGY AND ENVIRONMENT SECRETARIAT

**Sub :-** Grant of quarry leases in respect of buildings materials such as sand, jelly, stones, boulders and laterite stones in forest areas of the western ghats region-relaxation given to Public Works Department and Ports and Inland Water Transport Department, Shimoga.

**Read :-** 1. Government Order No. FEE 115 FFM 2001, dated : 26-02-2004.

2. Letter No. A5(6)GFL.CR.34/09-10, dated : 11-03-2010 of the Principal Chief Conservator of Forests, Bangalore.

**Preamble:**

In Government Order read at 1 above, guidelines in the Annexure were issued by the State Government for grant of quarry lease in respect of building materials such as sand, jelly , stones, boulders and laterite stones in forest areas of the Western Ghats region of Karnataka, the area of each quarry shall not be more than 0.50 ha. and if the above mentioned building materials are available in non forest area within 10 k.m. of the proposed site, then quarrying in forest area will not be permitted in such areas.

The Principal Chief Conservator of Forests has sent a proposal to Government in his letter dated : 11-03-2010 read at (2) above for diversion of 20.80 ha. of forest land for quarrying of stones in Joga village of Honnali Taluk, Davanagere District in favour of Executive Engineer, Public Works Department and Ports and Inland Water Transport Department, Shimoga.

He has further stated that since the material is required for development activities and the user agency is the Government Department, area was proposed for diversion. Further, this would help in controlling the entry of large number of private user agencies to the forest for quarrying purpose. Therefore, the condition may kindly be relaxed at Government level.

The proposal has been examined in detail and the following orders are issued.

**G.O. NO. FEE 182 FFM 2009, BANGALORE, DATED : 24-03-2010.**

After considering the proposal, Government are pleased to accord relaxation of Sl.No.5 and 6 of the guidelines of the Annexure to the G.O. FEE 115 FFM 2001, dated : 26-02-2004 for diversion of 20.80 ha. of forest land for quarrying of stones in Joga Village, Honnali Taluk, Davanagere District in favour of Executive Engineer, Public Works Department and Ports and Inland Water Transport Department, Shimoga District.

This Order issued with immediate effect and until further orders.

By Order and in the name of the Governor of Karnataka

**H.M. Mallikarjuna Swamy**

PR NO. 965

Under Secretary to Government

Forest, Ecology and Environment Department

## FOREST, ECOLOGY AND ENVIRONMENT SECRETARIAT

**Sub :-** Grant of quarry leases in respect of buildings materials such as sand, jelly, stones, boulders and laterite stones in forest areas of the western ghats region-relaxation given to Public Works Department and Ports and Inland Water Transport Department, Shimoga.

**Read :-** 1. Government Order No. FEE 115 FFM 2001, dated : 26-02-2004.

2. Letter No. A5(6)GFL.CR.35/09-10, dated : 03-03-2010 of the Principal Chief Conservator of Forests, Bangalore.

**Preamble:**

In Government Order read at 1 above, guidelines in the Annexure were issued by the State Government for grant of quarry lease in respect of building materials such as sand, jelly , stones, boulders and laterite stones in forest areas of the Western Ghats region of Karnataka, the area of each quarry shall

not be more than 0.50 ha. and if the above mentioned building materials are available in non forest area within 10 k.m. of the proposed site, then quarrying in forest area will not be permitted in such areas.

The Principal Chief Conservator of Forests has sent a proposal to Government in his letter dated : 03-03-2010 read at (2) above for diversion of 18.00 ha. of forest land for quarrying of stones in Erekatte (Ft.Sy. No.15), Harogoppa (Ft.Sy.No.12) and Sidaginahal (Ft.Sy.No.1) villages in Shikaripura Taluk, in favour of Executive Engineer, Public Works Department and Ports and Inland Water Transport Department, Shimoga.

He has further stated that since the material is required for development activities and the user agency is the Government Department, area was proposed for diversion. Further, this would help in controlling the entry of large number of private user agencies to the forest for quarrying purpose. Therefore, the condition may kindly be relaxed at Government level.

The proposal has been examined in detail and the following orders are issued.

**G.O. NO. FEE 181 FFM 2009, BANGALORE, DATED : 24-03-2010.**

After considering the proposal, Government are pleased to accord relaxation of Sl.No.5 and 6 of the guidelines of the Annexure to the G.O. FEE 115 FFM 2001, dated : 26-02-2004 for diversion of 18.00 ha. of forest land for quarrying of stones in Erekatte (Ft.Sy. No.15), Harogoppa (Ft.Sy.No.12) and Sidaginahal (Ft.Sy.No.1) villages in Shikaripura Taluk in favour of Executive Engineer, Public Works Department and Ports and Inland Water Transport Department, Shimoga District.

This Order issued with immediate effect and until further orders.

By Order and in the name of the Governor of Karnataka

**H.M. Mallikarjuna Swamy**

Under Secretary to Government

Forest, Ecology and Environment Department

PR NO. 966

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಪುಲ್ಲಯ್ಯ, ಪಿ.ಎಸ್.ಐ. (ಸಿವಿಲ್), ಯರಗೇರಾ ಪೊಲೀಸ್ ಠಾಣೆ ರವರ ಖಾಯಂಪೂರ್ವ ಅವಧಿ ವಿಸ್ತರಿಸುವ ಕುರಿತು.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : 09/ಸಿಬ್ಬಂದಿ–1/2009–10 ದಿನಾಂಕ 01–07–2009 ಮತ್ತು 06–09–2009.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರಗಳಲ್ಲಿ ಶ್ರೀ ಪುಲ್ಲಯ್ಯ, ಪಿ.ಎಸ್.ಐ. ಯರಗೇರಾ ಪೊಲೀಸ್ ಠಾಣೆ ರವರು ದಿನಾಂಕ 15–12–2003ರಂದು ಸೇವಾ ನಿರತ ಪಿ.ಎಸ್.ಐ ಆಗಿ ನೇಮಕಾತಿ ಹೊಂದಿರುತ್ತಾರೆ. ಇವರ ವಿರುದ್ಧ ಶಿಕ್ಷೆಗಳು ಇದ್ದ ಪ್ರಯುಕ್ತ ನೇಮಕಾತಿ ಪ್ರಾಧಿಕಾರವು ಇವರ ಖಾಯಂ ಪೂರ್ವ ಅವಧಿಯನ್ನು ಕೆ.ಸಿ.ಎಸ್. (ಪ್ರೊಬೇಷನ್) ನಿಯಮ, 1977ರ ನಿಯಮ 4(1) (ii)ರನ್ವಯ ದಿನಾಂಕ 15–06–2006 ರಿಂದ 15–09–2007ರವರೆಗೆ ವಿಸ್ತರಿಸಿರುತ್ತಾರೆ. ಶ್ರೀ ಪುಲ್ಲಯ್ಯ ರವರ ಕರ್ತವ್ಯ ನಿರ್ವಹಣೆ ಉತ್ತಮವಾಗಿದ್ದು, ಇವರ ವಿರುದ್ಧ ಹಲವು ಶಿಕ್ಷೆಗಳು ಬಾಕಿ ಇದ್ದು ಹಾಗೂ ಕೆ.ಸಿ.ಎಸ್. (ಪರಿವೀಕ್ಷಣೆ) ನಿಯಮಗಳು, 1977ರ ನಿಯಮ 4 & 5(1)ರನ್ವಯ ಪಿ.ಎಸ್.ಐ. ಹುದ್ದೆಯಲ್ಲಿ ಕಾರ್ಯಭಾರವನ್ನು ನಿರ್ವಹಿಸಲು ಸಮರ್ಥರಾಗಿರುತ್ತಾರೆ ಎಂದು ಇವರ ಚಾಲ್ತಿ ಶಿಕ್ಷೆ ಮುಗಿಯುವವರೆಗೂ ಅಂದರೆ ದಿನಾಂಕ 16–09–2007 ರಿಂದ 15–06–2011ರವರೆಗೆ ಪ್ರೊಬೇಷನರಿ ಅವಧಿಯನ್ನು ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 4(1) (i)ರನ್ವಯ ವಿಸ್ತರಿಸುವಂತೆ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 251 ಪೊಸಇ 2009, ಬೆಂಗಳೂರು, ದಿನಾಂಕ : 7ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1) (i)ರನ್ವಯ ಶ್ರೀ ಪುಲ್ಲಯ್ಯ, ಪ್ರೊ.ಪಿ.ಎಸ್.ಐ. ರವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 16–09–2007 ರಿಂದ 15–06–2011ರವರೆಗೆ ವಿಸ್ತರಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 967

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಕರ್ನಾಟಕ ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಖಾಲಿ ಇರುವ ನೇರ ನೇಮಕಾತಿ ವೈಜ್ಞಾನಿಕ ಸಹಾಯಕ ಹುದ್ದೆಗಳ ಭರ್ತಿ ಹಾಗೂ ವಿಶೇಷ ಆಯ್ಕೆ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು, ಬೆಂಗಳೂರು ರವರ ಕಛೇರಿ ಪತ್ರ ಸಂಖ್ಯೆ : ಸಿಬ್ಬಂದಿ–6/64/2009–10, ದಿನಾಂಕ 16–11–2009.

**ಪ್ರಸ್ತಾವನೆ :**

ಕರ್ನಾಟಕ ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಖಾಲಿ ಇರುವ 42 ನೇರ ನೇಮಕಾತಿ ವೈಜ್ಞಾನಿಕ ಸಹಾಯಕ ಹುದ್ದೆಗಳನ್ನು ಭರ್ತಿ ಮಾಡಲು ಹಾಗೂ ಈ ಹುದ್ದೆಗಳು ತಾಂತ್ರಿಕ ಹುದ್ದೆಗಳಾಗಿರುವುದರಿಂದ ಅಭ್ಯರ್ಥಿಗಳ ಆಯ್ಕೆ ಮಾಡುವಾಗ ವಿಶೇಷ ತಜ್ಞರನ್ನೊಳಗೊಂಡ ಸಮಿತಿಯನ್ನು ರಚಿಸುವಂತೆ ಓದಲಾದ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಸರ್ಕಾರವನ್ನು ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 11 ಪೊಸಿಲಿ 2010, ಬೆಂಗಳೂರು, ದಿನಾಂಕ : 07–04–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಕರ್ನಾಟಕ ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಖಾಲಿ ಇರುವ 42 ವೈಜ್ಞಾನಿಕ ಸಹಾಯಕ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ. ಮುಂದುವರೆದು ಈ ಹುದ್ದೆಗಳನ್ನು ವೃಂದ ಮತ್ತು ನೇಮಕಾತಿಗಳ ನಿಯಮಗಳನ್ವಯ ಪಾರದರ್ಶಕವಾದ ಆಯ್ಕೆ ಪದ್ಧತಿ ಮೂಲಕ ತುಂಬಲು ಈ ಕೆಳಕಂಡ 'ವಿಶೇಷ ಆಯ್ಕೆ ಸಮಿತಿ' ಯನ್ನು ರಚಿಸಿ ಆದೇಶಿಸಿದೆ.

| | | |
|---|---|---|
| 1. | ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು (ನೇಮಕಾತಿ ಮತ್ತು ತರಬೇತಿ) | – ಅಧ್ಯಕ್ಷರು |
| 2. | ರಾಷ್ಟ್ರೀಯ ನ್ಯಾಯ ವಿಜ್ಞಾನ ಪ್ರಯೋಗಾಲಯದ ನಿರ್ದೇಶಕರು/ಹೊರ ರಾಜ್ಯದ ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಸೇವೆಯಲ್ಲಿರುವ ಅಥವಾ ನಿವೃತ್ತರಾಗಿರುವ ಹಿರಿಯ ನ್ಯಾಯ ವಿಜ್ಞಾನ ಪರಿಣಿತರು. | – ಸದಸ್ಯರು |
| 3. | ಹೊರ ರಾಜ್ಯದ ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಹಾಲಿ ಸೇವೆಯಲ್ಲಿರುವ ಅಥವಾ ನಿವೃತ್ತರಾಗಿರುವ ಹಿರಿಯ ನ್ಯಾಯ ವಿಜ್ಞಾನ ಪರಿಣಿತರು | – ಸದಸ್ಯರು |
| 4. | ಸಮಾಜ ಕಲ್ಯಾಣ ಇಲಾಖೆಯ ಪ್ರತಿನಿಧಿಗಳು | – ಸದಸ್ಯರು |
| 5. | ಹಿಂದುಳಿದ ವರ್ಗ ಮತ್ತು ಅಲ್ಪ ಸಂಖ್ಯಾತರ ಇಲಾಖೆಯ ಪ್ರತಿನಿಧಿಗಳು | – ಸದಸ್ಯರು |
| 6. | ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು ಅಥವಾ ನ್ಯಾಯ ವಿಜ್ಞಾನ ಪ್ರಯೋಗಾಲಯದ ಹಿರಿಯ ಪತ್ರಾಂಕಿತ ಅಧಿಕಾರಿ | – ಸದಸ್ಯರು |
| 7. | ಪೊಲೀಸ್ ಉಪ ಮಹಾ ನಿರೀಕ್ಷಕರು, ನೇಮಕಾತಿ, ಬೆಂಗಳೂರು | – ಸದಸ್ಯ ಕಾರ್ಯದರ್ಶಿಗಳು |

ಅಧಿಕಾರೇತರ ಸದಸ್ಯರು ನಿಯಮಾನುಸಾರ ಭತ್ಯೆಯನ್ನು ಪಡೆಯಲು ಅರ್ಹರಾಗಿದ್ದಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಅನಧಿಕೃತ ಟಿಪ್ಪಣಿ ಸಂಖ್ಯೆ : FD 56 EXP-11/10 ದಿನಾಂಕ 12–03–2010ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 968

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)